ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ

**ಚಂದಾದರ ವಿವರ**

| | | |
|---|---|---|
| **ದೇಶ** | | |
| ವಾರ್ಷಿಕ | ₹ | 200–00 |
| ಅರ್ಧ ವಾರ್ಷಿಕ | ₹ | 100–00 |
| ಬಿಡಿ ಪ್ರತಿ | ₹ | 10–00 |
| **ಗಲ್ಫ್ ರಾಷ್ಟ್ರಗಳಿಗೆ** | | |
| ವಾರ್ಷಿಕ | ₹ | 1,500–00 |
| ಅರ್ಧ ವಾರ್ಷಿಕ | ₹ | 750–00 |

❖ ಸಂಪುಟ: 18 ❖ ಸಂಚಿಕೆ: 5 ❖ ಪುಟ: 12 ❖ ಮಾರ್ಚ್ 1-15, 2014 ❖ ಬೆಲೆ: 10/- http://www.salafimangalore.org


# ಇಸ್ಲಾಮಿ ಸಂಘಟನೆಗಳ ದೌತ್ಯ ಮತ್ತು ಮಾರ್ಗ

ಮನುಷ್ಯ ಕೇಂದ್ರಿತವಾದ ಒಂದು ಪ್ರಾಪಂಚಿಕ ದೃಷ್ಟಿಕೋನವನ್ನು ಇಸ್ಲಾಮ್ ಪರಿಚಯಿಸುತ್ತದೆ. ಅಖಿಲ ಪ್ರಪಂಚವನ್ನು ಮನುಷ್ಯನಿಗಾಗಿ ವ್ಯವಸ್ಥಿತ ರೀತಿಯಲ್ಲಿ ಸೃಷ್ಟಿಸಲಾಗಿದೆ. ಸಕಲ ಪ್ರಾಪಂಚಿಕ ವಸ್ತುಗಳನ್ನು ಮನುಷ್ಯನಿಗೆ ಅಧೀನಗೊಳಿಸಲಾಗಿದೆ. ಪವಿತ್ರ ಕುರ್‌ಆನ್ ಹೇಳುವುದನ್ನು ನೋಡಿರಿ:

"ಆಕಾಶಗಳನ್ನೂ ಭೂಮಿಯನ್ನೂ ಸೃಷ್ಟಿಸಿದವನು ಅಲ್ಲಾಹನೇ. ಅವನು ಆಕಾಶದಿಂದ ನೀರನ್ನು ಇಳಿಸಿದನು. ಅದರ ಮೂಲಕ ನಿಮಗೆ ಆಹಾರಕ್ಕಾಗಿ ಫಲವಸ್ತುಗಳನ್ನು ಉತ್ಪಾದಿಸಿದನು. ತನ್ನ ಆಜ್ಞೆಯಂತೆ ಸಮುದ್ರದಲ್ಲಿ ಸಂಚರಿಸಲಿಕ್ಕಾಗಿ (ಅವನು) ನಿಮಗೆ ಹಡಗುಗಳನ್ನು ಅಧೀನಗೊಳಿಸಿಕೊಟ್ಟಿರುವನು, ನಿಮಗೆ ನದಿಗಳನ್ನು ಅಧೀನಗೊಳಿಸಿ ಕೊಟ್ಟಿರುತ್ತಾನೆ ಮತ್ತು ನಿರಂತರವಾಗಿ(ತಂತಮ್ಮ ಪಥದಲ್ಲಿ ಸಂಚರಿಸುತ್ತಿರುವ)ರುವ ರೀತಿಯಲ್ಲಿ ಸೂರ್ಯನನ್ನೂ ಚಂದ್ರನನ್ನೂ ಅವನು ನಿಮಗೆ ಅಧೀನಗೊಳಿಸಿ ಕೊಟ್ಟಿರುವನು ಮತ್ತು ನಿಮಗೆ ಹಗಲು-ರಾತ್ರಿಯನ್ನು ಅಧೀನಗೊಳಿಸಿ ಕೊಟ್ಟಿರುವನು. (ಮಾತ್ರವಲ್ಲ) ಅವನೊಡನೆ ನೀವು ಅಪೇಕ್ಷಿಸಿದ ಎಲ್ಲವನ್ನೂ ಅವನು ನಿಮಗೆ ಕೊಟ್ಟಿರುವನು. ಒಂದು ವೇಳೆ ನೀವು ಅಲ್ಲಾಹನ ಅನುಗ್ರಹಗಳನ್ನು ಎಣಿಸುವುದಾದರೆ ನೀವದನ್ನು ಎಣಿಸಲಾರಿರಿ." (ಕುರ್‌ಆನ್ 14:32-34)

"ಖಂಡಿತವಾಗಿಯೂ ಆದಮರ ಸಂತತಿಗಳನ್ನು (ಮಾನವರನ್ನು) ನಾವು ಗೌರವಿಸಿದ್ದೇವೆ. ಕಡಲಲ್ಲೂ ಕರೆಯಲ್ಲೂ ಅವರನ್ನು ನಾವು (ವಾಹನಗಳಲ್ಲಿ) ಏರಿಸಿದ್ದೇವೆ. ಶುದ್ಧವಾದ ವಸ್ತುಗಳಿಂದ ಅವರಿಗೆ ಆಹಾರ ಒದಗಿಸಿದ್ದೇವೆ ಮತ್ತು ನಾವು ಸೃಷ್ಟಿಸಿದವರಲ್ಲಿ ಹೆಚ್ಚಿನವರಿಗಿಂತ ಅವರಿಗೆ ನಾವು ಶ್ರೇಷ್ಠತೆಯನ್ನು ದಯಪಾಲಿಸಿದ್ದೇವೆ." (ಕುರ್‌ಆನ್ 27:70)

"ಮತ್ತು ಅವನು ನಿಮಗೆ ತನ್ನ ವತಿಯಿಂದ ಭೂಮಿ ಆಕಾಶಗಳಲ್ಲಿರುವುದೆಲ್ಲವನ್ನೂ ಅಧೀನಗೊಳಿಸಿ ಕೊಟ್ಟಿರುವನು. ಚಿಂತಿಸುವವರಿಗೆ ನಿಜವಾಗಿಯೂ ಅದರಲ್ಲಿ ಹಲವು ಸಂದೇಶಗಳಿವೆ." (ಕುರ್‌ಆನ್ 45:13)

"ಮನುಷ್ಯ ವಂಶದ ಉತ್ಪತ್ತಿಯ ಹಂತದಲ್ಲೇ ಅಲ್ಲಾಹು ಮಾನವರನ್ನು ಗೌರವಿಸಿದ್ದಾನೆ. ಸೃಷ್ಟಿಗಳಲ್ಲಿ ಉತ್ತಮರೂ ಪರಿಶುದ್ಧರೂ ಆದ ಮಲಕ್‌ಗಳಿಂದ ಮಾನವನಿಗೆ ಪ್ರಣಾಮವೆರಗಿಸಿದ್ದನ್ನು ಕುರ್‌ಆನ್ ಪ್ರಸ್ತಾಪಿಸಿದೆ."

"ನೀವು ಆದಮರಿಗೆ ಪ್ರಣಾಮವೆರಗಿರಿ ಎಂದು ನಾವು ಮಲಕ್‌ಗಳೊಡನೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಅವರು ಪ್ರಣಾಮವೆರಗಿದರು, ಇಬ್ಲೀಸನ ಹೊರತು. ಅವನು ಅಹಂಭಾವ ತೋರಿಸಿ ನಿರಾಕರಿಸಿದನು. ಅವನು ಸತ್ಯನಿಷೇಧಿಗಳಲ್ಲಿ ಸೇರಿದವನಾಗಿದ್ದಾನೆ."

(ಕುರ್‌ಆನ್ 2:34)

ಮಾನವನ ಶ್ರೇಷ್ಠತೆಯನ್ನು ಅಂಗೀಕರಿಸದೆ ಅಹಂಕಾರ ತೋರಿಸಿದ ಫಲವಾಗಿ ಇಬ್ಲೀಸನು ಅಲ್ಲಾಹನ ಕೊಪಕ್ಕೀಡಾಗಿ ಸ್ವರ್ಗದಿಂದ ಹೊರದೂಡಲ್ಪಟ್ಟವನು. ಮಾತ್ರವಲ್ಲ, ಮಾನವರನ್ನು ನೇರವಾದ ದಾರಿಯಿಂದ ತಪ್ಪಿಸುವೆನೆಂದು ಇಬ್ಲೀಸ್ ಘೋಷಿಸುತ್ತಾನೆ.

ಅಲ್ಲಾಹು ಹೇಳಿದನು: "ನಾನು ನಿನ್ನೊಡನೆ ಆಜ್ಞಾಪಿಸಿದಾಗ ನೀನು ಪ್ರಣಾಮವೆರಗದಿರಲು ನಿನ್ನನ್ನು ತಡೆದುದಾದರೂ ಯಾವುದು?" ಅವನು(ಇಬ್ಲೀಸ್) ಹೇಳಿದನು: "ನಾನು ಅವನಿಗಿಂತ(ಆದಮರಿಗಿಂತ) ಶ್ರೇಷ್ಠನಾಗಿದ್ದೇನೆ. ನನ್ನನ್ನು ನೀನು ಅಗ್ನಿಯಿಂದ ಸೃಷ್ಟಿಸಿರುವೆ ಮತ್ತು ಅವನನ್ನು ನೀನು ಮಣ್ಣಿನಿಂದ ಸೃಷ್ಟಿಸಿರುವೆ. (ಅದುವೇ ನನ್ನನ್ನು ತಡೆದುದು) ಅಲ್ಲಾಹನು ಹೇಳಿದನು: "ಹಾಗಾದರೆ ನೀನು ಇಲ್ಲಿಂದ ಇಳಿದು ಹೋಗು. ಇಲ್ಲಿ ನಿನಗೆ ಅಹಂಕಾರ ತೋರಿಸಲಾಗುವುದಿಲ್ಲ. ಆದ್ದರಿಂದ ಹೊರ ಹೋಗು. ನಿಶ್ಚಯವಾಗಿಯೂ ನೀನು ನೀಚರಲ್ಲಿ ಸೇರಿದವನಾಗಿರುವೆ. ಇಬ್ಲೀಸ್ ಹೇಳಿದನು: "ಹಾಗಿದ್ದರೆ ನೀನು ನನ್ನನ್ನು ಪಥಭ್ರಷ್ಟನಾಗಿ ಮಾಡಿರುವುದರಿಂದ ನಾನು ಖಂಡಿತವಾಗಿಯೂ ನಿನ್ನ ನೇರವಾದ ಮಾರ್ಗದಲ್ಲಿ ಅವರಿಗಾಗಿಯೇ (ನಿನ್ನ ದಾಸರಿಗಾಗಿಯೇ) ಕಾದಿರುವೆನು." (ಕುರ್‌ಆನ್ 7:12, 13, 16)

ಆದರೆ ಜನರಲ್ಲಿ ದೇವಭಯವಿಲ್ಲದವರನ್ನು ಹೊರತು ಬೇರೆ ಯಾರನ್ನೂ ದಾರಿ ತಪ್ಪಿಸಲಾಗುವುದಿಲ್ಲವೆಂದು ಇಬ್ಲೀಸನು ಸಮ್ಮತಿಸುತ್ತಾನೆ. (6ನೇ ಪುಟಕ್ಕೆ)



بسم الله الرحمن الرحيم

الحمد لله رب العالمين والصلاة والسلام على نبينا محمد وآله وصحبه أجمعين أما بعد

# ಹುಸಿ ಭರವಸೆಗಳಿಲ್ಲದ ಅಲ್ಲಾಹನ ಪಕ್ಷದ ಪ್ರಣಾಳಿಕೆ

ಚುನಾವಣೆಗಳು ಸಮೀಪಿಸುವಾಗ ಎಲ್ಲಾ ರಾಜಕೀಯ ಪಕ್ಷಗಳು ತಮ್ಮ ಪ್ರಣಾಳಿಕೆಗಳನ್ನು ಬಿಡುಗಡೆಗೊಳಿಸುತ್ತವೆ. ತಮ್ಮ ಪಕ್ಷ ಅಧಿಕಾರಕ್ಕೆ ಬಂದರೆ ಏನೆಲ್ಲಾ ಮಾಡುತ್ತೇವೆಂಬ ಭರವಸೆಗಳ ಮಹಾಪೂರವನ್ನೇ ಹರಿಸಿ ಮತದಾರರಿಗೆ ಆಮಿಶ ಒಡ್ಡಿ ಮತ ಗಿಟ್ಟಿಸಲೆತ್ನಿಸುತ್ತಾರೆ. ಈಗೀಗ ಉಚಿತ ಕೊಡುಗೆಗಳ ಭರವಸೆಯನ್ನು ನೀಡಲಾಗುತ್ತದೆ. ಕೆಲವು ಪಕ್ಷಗಳು ಮತದಾನಕ್ಕಿಂತ ಮುಂಚೆ ಬಡವರಿಗೆ ಹಣ, ಹೆಂಡ, ಧೋತಿ, ಸೀರೆಗಳನ್ನು ಹಂಚಿ ತಮಗೇ ಮತ ನೀಡುವಂತೆ ಪ್ರಮಾಣ ಮಾಡಿಸುವುದಿದೆ. ಪಕ್ಷಗಳು ಮಾತ್ರವಲ್ಲ, ವಿವಿಧ ಪಕ್ಷಗಳ ಅಭ್ಯರ್ಥಿಗಳು ವೈಯಕ್ತಿಕವಾಗಿಯೂ ಸಾಕಷ್ಟು ಭರವಸೆಗಳನ್ನು ನೀಡಿ ಜನರ ಒಲವು ಗಳಿಸಲೆತ್ನಿಸುತ್ತಾರೆ. ಈ ರಾಜಕೀಯ ಪಕ್ಷಗಳು ಮತ್ತು ರಾಜಕಾರಣಿಗಳು ನೀಡುವ ಹೆಚ್ಚಿನ ಭರವಸೆಗಳು ಸುಳ್ಳು ಮತ್ತು ವಂಚನೆಯಾಗಿದೆ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ರಾಜಕಾರಣಿಗಳು ನೀಡಿದ ಭರವಸೆಗಳು ನಿಜವಾಗಿರುತ್ತಿದ್ದರೆ ಭಾರತೀಯರ ಸಮಸ್ಯೆಗಳೆಲ್ಲಾ ಪರಿಹರಿಸಲ್ಪಟ್ಟು ಭಾರತವಿಂದು ಸಮೃದ್ಧ ದೇಶವಾಗಿ ಜಗತ್ತಿಗೆ ಮಾದರಿಯಾಗಿರುತ್ತಿತ್ತು. ಆದರೆ ನಮ್ಮ ದೇಶದ ಬಹುಪಾಲು ಮಂದಿ ಈಗಲೂ ಬಡವರು ಮತ್ತು ಅವಿದ್ಯಾವಂತರು. ಜನರ ಸಮಸ್ಯೆಗಳನ್ನು ಪರಿಹರಿಸುವುದರಲ್ಲಿ ನಮ್ಮ ರಾಜಕೀಯ ಪಕ್ಷಗಳಿಗೆ ಮತ್ತು ರಾಜಕಾರಣಿಗಳಿಗೆ ಆಸಕ್ತಿಯಿಲ್ಲ. ಜನರ ಸಮಸ್ಯೆಗಳು ಬಗೆಹರಿದರೆ ಮತ್ತೆ ಜನರು ತಮ್ಮ ಬಳಿ ಬರಲಿಕ್ಕಿಲ್ಲ. ಅದಕ್ಕಾಗಿ ಬಡವರು ಸದಾ ಬಡವರಾಗಿಯೇ ಇರಬೇಕು, ಅವಿದ್ಯಾವಂತರು ಸಾಯುವ ತನಕ ಅವಿದ್ಯಾವಂತರಾಗಿಯೇ ಇದ್ದು ಪ್ರತಿಯೊಂದಕ್ಕೂ ತಮ್ಮನ್ನು ನಂಬಿಕೊಂಡಿರಬೇಕೆಂಬ ದುರುದ್ದೇಶ ರಾಜಕಾರಣಿಗಳದ್ದು. ಬಡವರು, ಅವಿದ್ಯಾವಂತರು ಮತ್ತು ದುರ್ಬಲರ ಹೆಸರಲ್ಲಿ ಅಧಿಕಾರ ಗಿಟ್ಟಿಸಿ ದೇಶದ ಸಂಪತ್ತನ್ನು ಲೂಟಿ ಹೊಡೆದು ಮೆರೆಯುತ್ತಿರುವ ಭ್ರಷ್ಟ ರಾಜಕಾರಣಿಗಳು ದೇಶದಲ್ಲಿ ಇನ್ನಷ್ಟು ಸಮಸ್ಯೆಗಳನ್ನು ಹುಟ್ಟು ಹಾಕಿ ಜನಸಾಮಾನ್ಯರ ಬದುಕಿನಲ್ಲಿ ಚೆಲ್ಲಾಟವಾಡುತ್ತಿದ್ದಾರೆ.

ಪ್ರಪಂಚದಾದ್ಯಂತದ ಸರ್ವಜನರ ಸಕಲ ಸಮಸ್ಯೆಗಳಿಗೂ ಪರಿಹಾರ ನೀಡಬಲ್ಲ, ಯಾವುದೇ ರೀತಿಯ ಹುಸಿ ಭರವಸೆಗಳಿಲ್ಲದ, ಸತ್ಯಸಂಧವಾದ, ಪ್ರಾಮಾಣಿಕವಾದ ಪ್ರಣಾಳಿಕೆಯೊಂದು 1400 ವರ್ಷಗಳ ಹಿಂದೆ ಅವತೀರ್ಣಗೊಂಡಿದೆ. ಆ ಪರಮ ಪವಿತ್ರವಾದ ಪ್ರಣಾಳಿಕೆಯಲ್ಲಿ ನೀಡಲಾದ ಎಲ್ಲಾ ವಾಗ್ದಾನಗಳು ಸಂಪೂರ್ಣ ಸತ್ಯವಾಗಿದೆ. ಅದುವೇ ವಿಶ್ವವಾಸಿಗಳ ಸರ್ವ ಸಮಸ್ಯೆಗಳನ್ನು ಆಲಿಸಿ ಪರಿಹರಿಸುತ್ತಿರುವ ಪ್ರಪಂಚದೊಡೆಯನಾದ ಅಲ್ಲಾಹನ ಪಕ್ಷದ ಪ್ರಣಾಳಿಕೆ. ನಾವಾಗಲಿ, ನಮ್ಮ ಹಿರಿಯರಾಗಲಿ ಬೇಡಿಕೆಗಳ ಈಡೇರಿಕೆಗಾಗಿ ಯಾವುದೇ ಅರ್ಜಿ ಸಲ್ಲಿಸದೆಯೇ ಜಾತಿ, ಮತ ಭೇದವಿಲ್ಲದೆ, ಅಲ್ಪಸಂಖ್ಯಾತ, ಬಹುಸಂಖ್ಯಾತ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳೆಂದು ಬೇರ್ಪಡಿಸದೆ ಸಮಸ್ತ ಮಾನವ ಕೋಟಿಗೆ ನೀರು, ಗಾಳಿ, ಬೆಳಕು, ಆಹಾರಗಳ ಸಹಿತ ಸಕಲ ಸೌಕರ್ಯಗಳನ್ನು ಒದಗಿಸಿಕೊಟ್ಟು ಪರಿಪಾಲಿಸುತ್ತಿರುವ ಪರಮ ದಯಾಮಯನಾದ ಅಲ್ಲಾಹನ ಅಪಾರ ಅನುಗ್ರಹಗಳನ್ನು ಅನುಭವಿಸುತ್ತಿರುವ ನಮ್ಮಿಂದ ಅವನು ಯಾವುದೇ ತೆರಿಗೆಯನ್ನು ವಸೂಲು ಮಾಡುತ್ತಿಲ್ಲ. ಬದಲಾಗಿ ಅವನ ಪ್ರಣಾಳಿಕೆಯನ್ನು ಅಂಗೀಕರಿಸಿ ಅದರನ್ವಯ ಜೀವಿಸಿದರೆ ಮರಣಾನಂತರದ ಜೀವನದಲ್ಲಿ ಎಂದೆಂದೂ ಕೊನೆಗೊಳ್ಳದ ಶಾಶ್ವತ ಸುಖಾಡಂಭರಗಳ ಸ್ವರ್ಗವನ್ನು ಕೊಡುಗೆಯಾಗಿ ನೀಡುವೆನೆಂದು ಅವನು ವಾಗ್ದಾನ ನೀಡಿದ್ದಾನೆ. ಭೂಲೋಕದಲ್ಲಿ ತನ್ನೆಲ್ಲಾ ಅನುಗ್ರಹಗಳನ್ನು ಅನುಭವಿಸಿ ತನ್ನ ಪ್ರಣಾಳಿಕೆಯನ್ನು ಧಿಕ್ಕರಿಸಿ ಸ್ವೇಚ್ಛೆಯಂತೆ ಜೀವಿಸಿದವರನ್ನು ಮರಣಾನಂತರ ಶಾಶ್ವತವಾದ ನರಕಾಗ್ನಿಯಲ್ಲಿ ಹಾಕಿ ಉರಿಸುವೆನೆಂದೂ ಅವನು ಮುನ್ನೆಚ್ಚರಿಕೆ ನೀಡಿದ್ದಾನೆ.

ಕರುಣಾಮಯನಾದ ಅಲ್ಲಾಹನ ಪ್ರಣಾಳಿಕೆಯ ಪ್ರಧಾನ ವಿಷಯವೇನೆಂದರೆ ಎಲ್ಲಾ ಮಿಥ್ಯ ಆರಾಧ್ಯರನ್ನು ತ್ಯಜಿಸಿ ಅಲ್ಲಾಹನನ್ನು ಮಾತ್ರ ಆರಾಧ್ಯನಾಗಿ ಅಂಗೀಕರಿಸಿ. ಆರಾಧನೆಯ ಎಲ್ಲಾ ಪ್ರಕಾರಗಳನ್ನು ಅವನಿಗೆ ಮಾತ್ರ ಸಮರ್ಪಿಸಬೇಕು ಎಂಬುದಾಗಿದೆ. ಭೂಲೋಕದಲ್ಲಿ ನಾವು ಅಪೇಕ್ಷಿಸದಯೇ, ಬೇಡಿಕೆಗಳ ಈಡೇರಿಕೆಗಾಗಿ ಧರಣಿ ಸತ್ಯಗ್ರಹ ನಡೆಸದೆಯೇ ನಮ್ಮೆಲ್ಲಾ ಅವಶ್ಯಕತೆಗಳನ್ನು ನೆರವೇರಿಸಿ ಕೊಡುವ ನಮ್ಮೆಲ್ಲರ ಸೃಷ್ಟಿಕರ್ತನೂ ಸಂರಕ್ಷನೂ ಆದ ಅಲ್ಲಾಹನನ್ನು ಅವನ ಪ್ರವಾದಿಗಳು ಕಲಿಸಿದ ರೀತಿಯಲ್ಲಿ ಆರಾಧಿಸುವ ಮೂಲಕ ಅವನು ಮಾಡಿದ ಇಷ್ಟೆಲ್ಲಾ ಅನುಗ್ರಹಗಳಿಗಾಗಿ ಅವನಿಗೆ ಕೃತಜ್ಞತೆ ಸಲ್ಲಿಸುವುದು ನಮ್ಮ ಕರ್ತವ್ಯವಲ್ಲವೇ?ಸಕಲ ಚರಾಚರಗಳ ಸೃಷ್ಟಿಕರ್ತನೂ ಸಂರಕ್ಷನೂ ಆದ ಅಲ್ಲಾಹನಿಗೆ ಕಂಚು, ತಾಮ್ರಗಳ ಮೂರ್ತಿಗಳನ್ನು ನಿರ್ಮಿಸಿ, ಕೆಜಿಗಟ್ಟಲೆ ಬಂಗಾರದ ಕಿರೀಟ ತೊಡಿಸಿ ಪುಷ್ಪಾರ್ಚನೆ, ಕ್ಷೀರಾಭಿಷೇಕ, ಸೀಯಾಳಾಭಿಷೇಕ, ತುಲಾಭಾರಗಳನ್ನು ಮಾಡಬೇಕಾಗಿಲ್ಲ. ಅವನು ಎಲ್ಲವನ್ನು ಆಲಿಸುವವನೂ ವೀಕ್ಷಿಸುವವನೂ ಆಗಿದ್ದಾನೆ. ಅಲ್ಲಾಹನ ಹೊರತಾದ ದೇವ-ದೇವಿಯರಿಗಾಗಲಿ, ದೇವ ಪುತ್ರರೆಂದೆನಿಸಿಕೊಂಡವರಿಗಾಗಲಿ, ಸ್ವಯಂಘೋಷಿತ ದೇವಮಾನವರಿಗಾಗಲಿ, ದರ್ಗಾಗಳಲ್ಲಿ ಸಮಾಧಿಸ್ಥರಾದ ಮೃತ ಮಹಾತ್ಮರಿಗಾಗಲಿ, ಜಿನ್ನ್-ಮಲಕ್‌ಗಳಿಗಾಗಲಿ ನಮ್ಮ ದೇಹದ ಯಾವುದಾದರೂ ಅಂಗ ಅಥವಾ ಅವಯವವನ್ನು ರಚಿಸಲು, ನಮಗೆ ನೀರು, ಗಾಳಿ, ಕತ್ತಲೆ, ಬೆಳಕು, ಆಹಾರ ವಸ್ತುಗಳನ್ನುಂಟು ಮಾಡಿ ಕೊಡಲು ಸಾಧ್ಯವೇ? ಜಗತ್ತಿನ ಎಲ್ಲಾ ದೇವೇತಾ ಶಕ್ತಿಗಳು ಒಂದಾದರೂ ಸಾಧ್ಯವಿಲ್ಲ ಎಂಬ ಸತ್ಯವನ್ನು ಮನಗಂಡು ಸರ್ವಜ್ಞನೂ ಸರ್ವಾಂತರ್ಯಾಮಿಯೂ ಆದ ಅಲ್ಲಾಹನ ಪಕ್ಷದ ಪ್ರಣಾಳಿಕೆಯಾದ ಪವಿತ್ರ ಕುರ್‌ಆನಿನ ಪಾಪನ ಸಂದೇಶಗಳನ್ನು ಅಂಗೀಕರಿಸಿ ಸತ್ಯವಿಶ್ವಾಸಿಗಳಾಗಿ, ಸತ್ಕರ್ಮಿಗಳಾಗಿ ಪರಿವರ್ತನೆಗೊಂಡು ಅಲ್ಲಾಹನ ಸತ್ಯವಾಗ್ದಾನದ ಫಲಾನುಭವಿಗಳಾಗಲು ಸನ್ನದ್ಧರಾಗೋಣ.ಅಲ್ಲಾಹನ ಪಕ್ಷದವರೇ ವಿಜಯಿಗಳು. •

# ಪರಿವರ್ತನೆಯ ಇಸ್ಲಾಮೀ ಇತಿಹಾಸ

✍ ಮುಹಮ್ಮದ್ ರಾಯಿಫ್, ಮಂಗಳೂರು

ಉಮರ್(ರ)ರವರ ಎತ್ತಿ ಹಿಡಿದ ಖಡ್ಗದಲ್ಲಿ ಅಜ್ಞಾನದ ಮಲಿನ ರಕ್ತ ಸವರಿದ ಕಾಲವೊಂದಿತ್ತು. ಅವರು ಇಸ್ಲಾಮಿನ ರಾಜ ರಸ್ತೆಗೆ ನಡೆದು ಬಂದಾಗ ಅವಿಶ್ವಸನೀಯತೆಯ ದೀರ್ಘ ಶ್ವಾಸಗಳಲ್ಲಿ ಸತ್ಯವಿಶ್ವಾಸಿಗಳು ಮತ್ತು ಸತ್ಯನಿಷೇಧಿಗಳು ಒಂದೇ ರೀತಿಯಾಗಿ ಸ್ತಬ್ಧರಾದರು. ಆ ಬಳಿಕ ಮುಂದಿಟ್ಟ ಉಮರ್(ರ) ರವರ ಪಾದಗಳು ಚಲಿಸಿದ ದಾರಿ ಇಸ್ಲಾಮಿನ ಇತಿಹಾಸವನ್ನು ಮನಃಪೂರ್ವಕ ಓದುವ ಯಾರನ್ನೂ ಪರಿವರ್ತಿಸದಿರದು.

ಜಾಹಿಲಿಯ್ಯಾ ಕಾಲಘಟ್ಟವೆಂದರೆ ನ್ಯಾಯ-ನೀತಿಯೇನೆಂದರಿಯದ ಸಮೂಹವೊಂದರ ನಗ್ನ ಚಿತ್ರಣವಾಗಿದೆ. ಸಾರ್ವತ್ರಿಕವಾದ ಅನೀತಿ ಮತ್ತು ಅಧರ್ಮಗಳ ಕರಾಳ ಕಾಲ. ಹೆಣ್ಣು ಮಕ್ಕಳನ್ನು ಜೀವಂತ ಹೂಳುವಾಗ ಆ ಮುಗ್ಧರ ಪರವಾಗಿ ಪ್ರತಿಭಟಿಸಲು ಜನರಿಲ್ಲದ ಕಾಲ. ಮಾನವ ಹಕ್ಕು ಮತ್ತು ಸಮಾನತೆಯ ಧ್ವನಿಗಳಿಗೆ ಮರುಭೂಮಿಯ ನಾಲ್ದೆಸೆಗಳಲ್ಲಿ ಪ್ರತಿಧ್ವನಿಸುವ ತ್ರಾಣವಿರುತ್ತಿದ್ದರೆ ಅಲ್ಲಿಂದ ಆರಂಭವಾಗುವ ಅರೇಬಿಯಾದ ಚರಿತ್ರೆ ಬೇರೊಂದಾಗಿರುತ್ತಿತ್ತು. ಆದರೆ ನ್ಯಾಯ ಧರ್ಮಗಳು ಅಜ್ಞಾನ ಕಾಲದ ಅಜ್ಞತೆಯಾಗಿಯೇ ಉಳಿಯಿತು.

ಅನ್ಯಾಯ, ಅಕ್ರಮಗಳ ಆ ಕಾಲವು ಕುಲ, ಗೋತ್ರ ಭೇದಗಳ ಸಂಘರ್ಷದ ಕಾಲವೂ ಆಗಿತ್ತು. ಕುಲ-ಗೋತ್ರಗಳ ಹೆಸರಲ್ಲಿ ನಡೆಯುತ್ತಿದ್ದ ಸಶಸ್ತ್ರ ಸಮರಗಳು ವರ್ಷಗಟ್ಟಲೆ ನಿರಂತರವಾಗಿ ಮುಂದುವರಿಯುತ್ತಿತ್ತು. ಒಂದು ಕುಲ ಅಥವಾ ಗೋತ್ರದ ದಮನವೇ ಇನ್ನೊಂದು ಗೋತ್ರದ ಗುರಿಯಾಗಿತ್ತು. ಒಂದಿಷ್ಟು ಮಾನವೀಯತೆಯಾಗಲಿ, ಕ್ಷಮಾದಾನದ ಗುಣವಾಗಲಿ ಇಲ್ಲದ ರಾಕ್ಷಸೀಯ ಸ್ವಭಾವದ ಕಾಡ ಜನರ ನಾಡಾಗಿತ್ತು ಅರೇಬಿಯಾ.

ಅರೇಬಿಯಾದಲ್ಲಿ ನಿಷೇಧಿಸಲ್ಪಡಬೇಕಾಗಿದ್ದ ಕೆಡುಕುಗಳು ಮತ್ತು ಅಧರ್ಮಗಳನ್ನು ಲೆಕ್ಕ ಹಾಕುತ್ತಿದ್ದರೆ, ಕಾಡು, ಗುಡ್ಡೆಗಳು ಮಾತ್ರವೇ ಉಳಿಯುತ್ತಿದ್ದವು. ಅಷ್ಟೊಂದು ವಿಷಪೂರಿತ ಜಂತುಗಳಂತಿದ್ದರು ಆ ಜನರು! ಇಸ್ಲಾಮಿನ ಆಗಮನದ ಬಳಿಕ ನೀಲಾಕಾಶದ ಕೆಳಗೆ ಪ್ರಶಾಂತವೂ ಸುಂದರವೂ ಆದ ನಾಡಾಗಿ ಅರೇಬಿಯಾ ಪ್ರಜ್ವಲಿಸಿತು. ಪ್ರತೀಕಾರದ ಅಟ್ಟಹಾಸಗಳು ಮತ್ತು ದೈನ್ಯತೆಯ ರೋಧನಗಳು ಮೊಳಗುತ್ತಿದ್ದ ಮಡಲಿನ ಗುಡಿಸಲುಗಳಿಂದ ಶಾಂತಿ, ಸಮಾಧಾನ ಹಾಗೂ ಸಾಂತ್ವನಗಳ ದಿವ್ಯವಾಣಿಗಳು ಕೇಳತೊಡಗಿದವು. ಅಶಾಂತಿಯ ದಟ್ಟ ಹೊಗೆ ಸರಿದು ಸ್ವರ್ಗ ಪ್ರತೀಕ್ಷೆಯ ಬೇಸಿಗೆ ಮಳೆ ಸುರಿದ ಹಗಲುಗಳು ಗೋಚರಿಸಿದವು. ಪ್ರಜೆಗಳ ಯೋಗಕ್ಷೇಮವನ್ನು ಅನ್ವೇಷಿಸುತ್ತಾ ರಾತ್ರಿಯ ಇರುಳಲ್ಲಿ ಸಂಚರಿಸುವ ಇಸ್ಲಾಮಿ ಸಾಮ್ರಾಜ್ಯದ ಚಕ್ರವರ್ತಿಯ ರಾಜ್ಯಭಾರದ ವೈಖರಿ. ಪಾಪ ಭಾರವನ್ನು ನೆನಪಿಸುತ್ತಾ ಒಂಟಿಯಾಗಿ ಕುಳಿತು ಕಣ್ಣೀರು

(10ನೇ ಪುಟಕ್ಕೆ)

# (ಮನ್ ಅರಫ ನಫ್ಸಹು, ಫಕದ್ ಅರಫ ರಬ್ಬಹು)
# ದೇಹವನ್ನು ಅರಿತರೆ ದೇವನನ್ನು ಅರಿಯಬಹುದು

ಭೂಮಿಯಲ್ಲಿ ಇಪ್ಪತ್ತು ಲಕ್ಷದಷ್ಟು ವಿಧಗಳ ಜೀವಿಗಳು ಇವೆ ಎಂಬುದು ವೈಜ್ಞಾನಿಕ ಅಂದಾಜು. ಇಷ್ಟು ವೈವಿಧ್ಯಮಯ ಜೀವಿಗಳಲ್ಲಿ ಮನುಷ್ಯನು ಅತ್ಯಂತ ವಿಸ್ಮಯಕರವಾದ ಜೀವಿಯಾಗಿರುವನು. ಮಾನವನ ದೇಹದಲ್ಲಿ ಒಟ್ಟು ಒಂಭತ್ತು ಸಿಸ್ಟಮ್‌ಗಳಿದ್ದು ಅವು ಬೇರೆ ಬೇರೆ ಘಟನೆಗಳಾಗಿಯೂ ಪರಸ್ಪರ ಸಹಕಾರದೊಂದಿಗೆ ಕ್ರಿಯಾಶೀಲವಾಗಿವೆ. ಅಸ್ಥಿ, ಪೇಸಿಶಿ, ಶ್ವಾಸ, ಪಚನ, ಅಂತಃಸ್ರಾವ, ಮಲಮೂತ್ರ, ಪ್ರತ್ಯುತ್ಪಾದನೆ ಮುಂತಾದ ಒಂಭತ್ತು ಘಟಕಗಳು ಮತ್ತು ಬೇರೆ ಬೇರೆ ವ್ಯವಸ್ಥೆಗಳು. ಇಂತಹ ಒಂದು ವ್ಯವಸ್ಥೆಗೆ ಸಮಾನವಾದ ವ್ಯವಸ್ಥೆಯನ್ನು ವಿಜ್ಞಾನಿಗಳು ನಿರ್ಮಿಸಬೇಕಾದರೆ ವಿಸ್ತೃತವಾದ ಜಾಗ ಹಾಗೂ ಕೋಟಿಗಟ್ಟಲೆ ಹಣ ಬೇಕಾಗಬಹುದು. ಉದಾ: ಡಯಾಲಿಸೀಸ್ ಯಂತ್ರವೊಂದನ್ನೇ ತೆಗೆದುಕೊಳ್ಳೋಣ. ಮನುಷ್ಯನ ಎರಡು ಕಿಡ್ನಿಗಳ ಪೈಕಿ ಒಂದು ಕಿಡ್ನಿಯ ವ್ಯವಸ್ಥೆಯಾಗಿದೆ ಡಯಾಲಿಸೀಸ್ ಯಂತ್ರ. ಈ ಯಂತ್ರವು ಒಂದು ದೊಡ್ಡ ಕೊಠಡಿ ತುಂಬು ವಷ್ಟು ದೊಡ್ಡದಾಗಿರುತ್ತದೆ. ಅದಕ್ಕಿಂತ ಚಿಕ್ಕ ಗಾತ್ರದಲ್ಲಿ ಈ ಯಂತ್ರವನ್ನು ನಿರ್ಮಿಸಲು ಸಾಧ್ಯವಿಲ್ಲ. ಹೀಗೆ ಕಣ್ಣು, ಕಿವಿ, ಬಾಯಿ, ಹೃದಯ, ಶ್ವಾಸವ್ಯವಸ್ಥೆ, ಪಚನ ವ್ಯವಸ್ಥೆ ಮುಂತಾದವುಗಳಿಗೆ ಪ್ರತಿಯಾಗಿ ಒಂದೊಂದು ಯಂತ್ರ ನಿರ್ಮಿಸಿ ಇಡೀ ಮಾನವ ದೇಹದ ಎಲ್ಲ ಘಟನೆಗಳ ವ್ಯವಸ್ಥೆ ಮಾಡಬೇಕಾದರೆ ಸಾವಿರಾರು ಎಕರೆಯಷ್ಟು ಜಾಗ ಬೇಕಾದೀತು ಎಂದು ವಿಜ್ಞಾನಿಗಳು ಹೇಳುತ್ತಾರೆ. ಇಷ್ಟು ವಿಸ್ತೃತ ಜಾಗದಲ್ಲಿ ಗಗನ ಚುಂಬಿಗಳಾದ ನೂರಾರು ಕಟ್ಟಡಗಳು ಹಾಗೂ ಅವುಗಳೊಳಗೆ ಪೈಪುಗಳು, ವಯರ್‌ಗಳು, ಯಂತ್ರಗಳ ಸಂಕೀರ್ಣವನ್ನೇ ನಿರ್ಮಿಸಿದರೂ ಒಂದು ಮಾನವ ಯಂತ್ರದಂತೆ ಪರಿಪೂರ್ಣವಾಗಿ ರೂಪಿಸಲು ಸಾಧ್ಯವಿಲ್ಲ ಎನ್ನುತ್ತಾರೆ ವಿಜ್ಞಾನಿಗಳು. ಅಷ್ಟೇ ಅಲ್ಲ, ಮಾನವ ದೃಕ್ ಶಕ್ತಿ, ವಿಚಾರ ಶಕ್ತಿ, ದಯೆ, ಆತ್ಮಾರ್ಥತೆ, ನೀತಿ ಪ್ರಜ್ಞೆ, ಅನುಕಂಪ, ಸಂತೋಷ, ದುಃಖ, ಸಿಟ್ಟು, ಸಿಡುಕು ಮುಂತಾದ ಭಾವ ಗುಣಗಳನ್ನು ರೂಪಿಸಲು ಸಾಧ್ಯವೇ ಇಲ್ಲವೆಂದು ವಿಜ್ಞಾನಿಗಳ ಅಭಿಮತ. ಸಾವಿರಾರು ಎಕರೆಗಳಷ್ಟು ಜಮೀನಿನಲ್ಲಿ ನೂರಾರು ಗಗನ ಚುಂಬಿ ಕಟ್ಟಡಗಳಲ್ಲಿ ತುಂಬ ಯಂತ್ರಗಳನ್ನು ನಿರ್ಮಿಸಿ ಪರಸ್ಪರ ಸಂಪರ್ಕ ಕಲ್ಪಿಸಿ ಚಾಲನೆ ಕೊಟ್ಟರೆ, ಅದಕ್ಕೆ ಜೀವ ತುಂಬಲು ವಿಚಾರ, ವಿಕಾರ, ವಾಕ್ ಶಕ್ತಿಗಳನ್ನು ನೀಡಲು ಸಾಧ್ಯವಿಲ್ಲ. ಆದರೆ ಇಷ್ಟೆಲ್ಲ ವ್ಯವಸ್ಥೆಗಳನ್ನು ಚೋಟುದ್ದದ ಮಾನವ ದೇಹದಲ್ಲಿ ಅಲ್ಲಾಹನು ಅಳವಡಿಸಿರುತ್ತಾನೆ. ಮಾತ್ರವಲ್ಲ, ಗರ್ಭದಲ್ಲಿರುವಾಗಲೇ ಆ ಕತ್ತಲೊಳಗೆ ಇದನ್ನೆಲ್ಲ ಅಣಿಗೊಳಿಸಿದ್ದಾನೆ.!

"ತನ್ನ ದೇಹವನ್ನು ಅರಿತವನು ತನ್ನ ದೇವನನ್ನು ಅರಿಯುತ್ತಾನೆ." (ಮನ್ ಅರಫ ನಫ್ಸಹು, ಫಕದ್ ಅರಫ ರಬ್ಬಹು) ಎಂಬ



ಆಪ್ತವಾಕ್ಯವೊಂದು ಬಹಳ ಅರ್ಥಪೂರ್ಣ. ಅಲ್ಲಾಹನ ಶಕ್ತಿ, ಸಾಮರ್ಥ್ಯ, ಸೃಷ್ಟಿ ವೈಭವದ ಅರಿವು ಮೂಡಲು ಇಡೀ ಜಗತ್ತಿಗೆ ದೃಷ್ಟಿ ಹಾಯಿಸ ಬೇಕಾಗಿಲ್ಲ, ಬರೇ ತನ್ನ ದೇಹದ ಬಗ್ಗೆ ಯೋಚಿಸಿದರೆ ಸಾಕು.

ಮಾನವ ದೇಹದ ವಿಸ್ಮಯಗಳು ಅಪರಿಮಿತ. ಪ್ರತಿಯೊಬ್ಬ ವ್ಯಕ್ತಿಯ ಹೆಬ್ಬೆರಳ ತುದಿಯ ರೇಖೆ ವಿಭಿನ್ನ. ಸಹಿಯಲ್ಲಿ ಫೋರ್ಜರಿ ಮಾಡಲಿಕ್ಕಾಗುತ್ತದೆ. ಆದರೆ ಹೆಬ್ಬೆಟ್ಟಿನಲ್ಲಿ ಸಾಧ್ಯವಾಗುವುದಿಲ್ಲ. ಜಗತ್ತಿನ ಕೋಟ್ಯಾನುಕೋಟಿ ಜನರಲ್ಲಿ ಪ್ರತಿಯೊಬ್ಬನ ಹೆಬ್ಬೆಟ್ಟು ವಿಭಿನ್ನವಾದುದು ಎಂದಾದರೆ ಅದರ ವಿನ್ಯಾಸವೂ ಬೇರೆ ಬೇರೆ ಎಂದರ್ಥ. ಇಷ್ಟು ಪುಟ್ಟ ಗಾತ್ರದ ಬೆರಳ ತುದಿಯಲ್ಲಿ ಇಷ್ಟು ವ್ಯತ್ಯಸ್ಥ ರೇಖೆಗಳನ್ನು ಮಾಡಲು ಯಾವ ತಂತ್ರಜ್ಞಾನಿ, ಕಲಾವಿದನಿಗೆ ಸಾಧ್ಯ? ಆ ವಿನ್ಯಾಸ ವೈವಿಧ್ಯತೆ ಹೇಗೆ ಸಾಧ್ಯ? ಪ್ರತಿಯೊಬ್ಬ ವ್ಯಕ್ತಿಯ ಮುಖ ಚಹರೆ ಬೇರೆ ಬೇರೆ. ಕಣ್ಣು, ಮೂಗು, ಬಾಯಿ, ಕಪೋಲಗಳ ವಿಧಾನ ಎಲ್ಲದಕ್ಕೂ ಒಂದೇ. ಆದರೆ ಒಬ್ಬನ ಮುಖ ಚಹರೆ ಮತ್ತೊಬ್ಬನಂತೆ ಇಲ್ಲ. ಆ ವ್ಯತ್ಯಾಸ ಎಲ್ಲಿರುತ್ತದೆ? ಕಲಾವಿದನೊಬ್ಬ ಮನುಷ್ಯನ ಮುಖದ ಮಾಡೆಲ್ ತೆಗೆಯದೆ ಸ್ವಂತವಾಗಿ ಮುಖವಾಡ ನಿರ್ಮಿಸುವುದಾದರೆ ಕೆಲವು ವಿಭಿನ್ನ ರೂಪಗಳಲ್ಲಿ ಮಾತ್ರ ಗ್ರಹಿಸಲು ಸಾಧ್ಯ. ಮುಂದಿನ ಸೃಷ್ಟಿಗಳೆಲ್ಲ ಮೊದಲಿನ ಹಾಗೆಯೇ ಬರಬಹುದು. ಕೋಟಿಗಟ್ಟಲೆ ವ್ಯಕ್ತಿಗಳ ಮುಖಗಳಿಗೆ ಕೋಟಿಗಟ್ಟಲೆ ಚಹರೆ, ಭಾವಗಳನ್ನು ಕೊಡುತ್ತಿರುವ ಅಲ್ಲಾಹನ ಸೃಷ್ಟಿ ಚಮತ್ಕಾರ ಎಷ್ಟು ಅದ್ಭುತ. ಇಷ್ಟು ಕೋಟಿ ಕೋಟಿ ಭಾವಗಳ ವ್ಯತ್ಯಾಸ ಹೊಂದುವುದು ಎಲ್ಲಿ?

ಧ್ವನಿಯ ವೈವಿಧ್ಯತೆಯಲ್ಲೂ ಈ ವಿಸ್ಮಯವಿದೆ. ಒಬ್ಬನ ಧ್ವನಿಯಂತೆ ಮತ್ತೊಬ್ಬನಿದ್ದಿಲ್ಲ. ಆದರೆ ಯಾರ ಧ್ವನಿ ಕೇಳಿದರೂ ಮನುಷ್ಯರದ್ದೆಂದೂ, ಗಂಡು ಅಥವಾ ಹೆಣ್ಣಿನದ್ದೆಂದೂ ಗೊತ್ತಾಗುತ್ತದೆ. ಆದರೆ ಅದರಲ್ಲಿ ಕೋಟಿಗಟ್ಟಲೆ ವೈವಿಧ್ಯತೆಗಳನ್ನು ಸೃಷ್ಟಿಸಿದ್ದು ಹೇಗೆ? ಒಬ್ಬನ ನಗುವಿನಂತೆ ಮತ್ತೊಬ್ಬನ ನಗು ಇರುವುದಿಲ್ಲ. ಆದರೆ ನಗುವುದು ಕೇಳಿ ಬ ಂ ದ ' ರ ' ಮನುಷ್ಯನೊಬ್ಬನು(ಳು) ನಗುತ್ತಿದ್ದಾನೆ(ಳೆ) ಎಂಬುದು ಗೊತ್ತಾಗುತ್ತದೆ. ಅಂದರೆ ಮನುಷ್ಯನ ನಗು ಇತರ ಜೀವಿಗಳ ಕಂಠ ಧ್ವನಿ ಗಳಿಂದ ವಿಭಿನ್ನವಾಗಿರುತ್ತದೆ ಎಂದರ್ಥ. ಈ ಸೀಮಿತ ವ್ಯವಸ್ಥೆಯಲ್ಲೂ ಕೋಟಿ ಕೋಟಿ ವೈವಿಧ್ಯತೆಗಳು ಮನುಷ್ಯ ಬುದ್ಧಿಯ ಊಹೆಗೂ ಮೀರಿದ್ದಾಗಿದೆ.

ನಗುವ ಜೀವಿ ಮನುಷ್ಯ ಮಾತ್ರ. ಮನುಷ್ಯನಲ್ಲದೆ ಬೇರೆ ಯಾವ ಜೀವಿಯೂ ನಗುವುದಿಲ್ಲ. ಮಾತನಾಡುವ ಜೀವಿ ಎಂಬ ವೈಶಿಷ್ಟ್ಯವನ್ನು ಅಲ್ಲಾಹನು ಮನುಷ್ಯನಿಗೆ ನೀಡಿದ್ದಾನೆ. ಆದರೆ ಉಳಿದ ಪ್ರಾಣಿಗಳೂ ತನ್ನದೇ ಆದ ಶೈಲಿಯಲ್ಲಿ ಮಾತನಾಡುತ್ತವೆ. "ಎಲ್ಲ ವಸ್ತುಗಳೂ ಅಲ್ಲಾಹನ ಸ್ತುತಿ ಕೀರ್ತನೆಗಳನ್ನು ಮಾಡುತ್ತವೆ" ಎಂದು ಅಲ್ಲಾಹನು ಕುರ್‌ಆನಿನಲ್ಲಿ ಹೇಳಿರುವುದರಿಂದ ಎಲ್ಲ ಜೀವಿಗಳಿಗೂ ತನ್ನದೇ ಆದ ಸಂವಹನ ಶಕ್ತಿ ಇದೆಯೆಂದು ವ್ಯಕ್ತವಾಗುತ್ತದೆ. ಮನುಷ್ಯನಂತೆ ಭಾಷೆ, ಶಬ್ದ, ಧ್ವನಿಗಳ ಮೂಲಕ ನಮಗೆ ವ್ಯಕ್ತವಾಗುವ ರೀತಿಯಲ್ಲಿ ಅವುಗಳು ಮಾತನಾಡುವುದಿಲ್ಲ. ಮನುಷ್ಯನಲ್ಲದೆ ಬೇರೆ ಜೀವಿ ಮಾತಾಡುವುದಿಲ್ಲ ಎನ್ನುವುದು ಈ ಅರ್ಥದಲ್ಲಾಗಿದೆ.

ಮುಖಭಾವದಲ್ಲಿ ನೋವು, ಸಂತೋಷ, ವ್ಯಥೆ, ಆಶ್ಚರ್ಯ, ಭಯ, ಸಿಟ್ಟು, ಶೃಂಗಾರ ಮುಂತಾದವುಗಳನ್ನು ಪ್ರಕಟ ಪಡಿಸುವುದರಲ್ಲೂ ಮನುಷ್ಯನು ವೈಶಿಷ್ಟ್ಯತೆಯನ್ನು ಪಡೆದಿರುತ್ತಾನೆ. ಇತರ ಜೀವಿಗಳ ಮುಖದಲ್ಲಿ ಭಯವುಂಟಾದಾಗ ಭಯದ ಲಕ್ಷಣ ಪ್ರಕಟವಾಗಬಹುದು. ಆದರೆ ದುಃಖ, ಸಂತೋಷ, ಶೃಂಗಾರ ಭಾವಗಳನ್ನು ಪ್ರಕಟಪಡಿಸಲು, ಹಾಸ್ಯ ಭಾವ ತೋರಲು ಅವುಗಳಿಗಾಗುವುದಿಲ್ಲ.

ಅಲ್ಲಾಹನ ಪರಿಪೂರ್ಣ ಜ್ಞಾನಕ್ಕೆ ಸೃಷ್ಟಿಗಳ ಪರಿಪೂರ್ಣತೆ ಒಂದು ನಿದರ್ಶನ. ವೈಜ್ಞಾನಿಕ ಉಪಕರಣಗಳು ಮೊದಲ ತಯಾರಿಯಲ್ಲಿ ಅಪೂರ್ಣವಾಗಿರುತ್ತವೆ. ನಂತರ ಅನುಭವದ ಆಧಾರದಲ್ಲಿ ಅಭಿವೃದ್ಧಿ ಆಗುತ್ತಾ ಇರುತ್ತದೆ. ಹದಿನೈದು ವರ್ಷಗಳ ಹಿಂದಿನ ಮೊಬೈಲ್ ಸೆಟ್ ಹಾಗೂ ಈಗಿನ ಮೊಬೈಲ್ ಸೆಟ್ಟನ್ನು ಗಮನಿಸಿರಿ. 20 ವರ್ಷಗಳ ಹಿಂದಿನ ಕಂಪ್ಯೂಟರ್ ಯಂತ್ರವನ್ನೂ ಈಗಿನದ್ದನ್ನೂ ನೋಡಿರಿ. ಈಗಿನದ್ದಕ್ಕೆ ಆಗಿನದ್ದು ಏನೂ ಇಲ್ಲ. ಆದರೆ ಅಲ್ಲಾಹನ ಸೃಷ್ಟಿ ಪ್ರಥಮದಲ್ಲೇ ಪರಿಪೂರ್ಣವಾಗಿರುತ್ತದೆ. ಈಗಿನ ಮನುಷ್ಯನ ದೇಹದ ಯಂತ್ರದಲ್ಲಿ ಏನೆಲ್ಲಾ ಸೌಕರ್ಯಗಳಿದ್ದವೋ ಅವೆಲ್ಲವೂ ಪ್ರಥಮ ಮಾನವ ಪ್ರವಾದಿ ಆದಮ್(ಅ)ರವರ ದೇಹದಲ್ಲೂ ಇದ್ದುವು. ಅಲ್ಲಾಹನು ಪರಮ ತಜ್ಞನೆಂಬುದಕ್ಕೆ ಇದು ಪುರಾವೆಯಾಗಿರುತ್ತದೆ. ಕಾಲಕ್ರಮೇಣ ಅನುಭವದ ಆಧಾರದಲ್ಲಿ ಮಾತ್ರ ಮನುಷ್ಯ ಸೌಕರ್ಯಗಳನ್ನು ಹೆಚ್ಚಿಸುತ್ತಾ ಇರುತ್ತಾನೆ. ಇದು ಅವರ ಪರಿಮಿತಿಯನ್ನು ಸೂಚಿಸುತ್ತದೆ.

ಮನುಷ್ಯನ ಹೆಬ್ಬೆಟ್ಟಿನ ಅದ್ಭುತ ವ್ಯತ್ಯಾಸಕ್ಕೆ ಕುರ್‌ಆನಿನಲ್ಲಿ ಪುರಾವೆಯಿದೆ. ಪರಲೋಕದಲ್ಲಿ ಮನುಷ್ಯನ ದೇಹವನ್ನು ಪುನರ್‌ರೂಪಿಸುವಾಗ ಅವನ ಬೆರಳ ತುದಿಗಳನ್ನು ಪುನರ್ ರೂಪಿಸಲಾಗುವುದು ಎಂದು ಕುರ್‌ಆನಿನಲ್ಲಿದೆ. (75:4)

ಮನುಷ್ಯನ ಬೆರಳ ತುದಿಯನ್ನು ಪುನರ್ ರೂಪಿಸಲು ಅಲ್ಲಾಹನು ಶಕ್ತನಿದ್ದಾನೆ ಎಂದು ಸೂಕ್ತದಲ್ಲಿ ಹೇಳಲಾಗಿದೆ. ಇಲ್ಲಿ ಮರಣ ಹೊಂದಿ ಮಣ್ಣಾಗಿ ಹೋದ ದೇಹವನ್ನು ಪುನಃ ಯಥಾರೂಪದಲ್ಲಿ ಮರಳಿ ಸೃಷ್ಟಿಸಲು ಅಲ್ಲಾಹನಿಗೆ ಸಾಧ್ಯವಾಗುತ್ತದೆ. ಆದರೆ ಕಣ್ಣು, ಮೂಗು, ಹೃದಯ, ಮೆದುಳು, ಲಿವರ್, ಶ್ವಾಸಕೋಶ ಮುಂತಾದ ಸಂಕೀರ್ಣ ಘಟಕಗಳನ್ನು ಕೂಡಾ ಯಥಾಸ್ಥಿತಿಗೆ ಮರಳಿ ಚಾಲನೆ ಕೊಡುವ ಅದ್ಭುತ ಶಕ್ತಿಯ ಬಗ್ಗೆ ಹೇಳದೆ ಬೆರಳ ತುದಿಗಳನ್ನು ಪುನರ್ರೂಪಿಸುವ ಬಗ್ಗೆ ಹೇಳಿದ್ದು ಯಾಕೆ ಎಂಬ ಪ್ರಶ್ನೆ ಬರಬಹುದು. ಜಗತ್ತಿನ ಪ್ರತಿಯೊಬ್ಬರ ಹೆಬ್ಬೆಟ್ಟು ಬೇರೆ ಬೇರೆ ಎಂಬುದನ್ನು ಅರಿತರೆ ಪ್ರಶ್ನೆಗೆ ಉತ್ತರ ದೊರೆಯುತ್ತದೆ. ಇಹಲೋಕದಲ್ಲಿರುವಂತೆ ಕೋಟಿ ಕೋಟಿ ವೈವಿಧ್ಯತೆಯಿಂದ ಕೂಡಿದ ಹೆಬ್ಬೆಟ್ಟುಗಳನ್ನು ಯಥಾರೂಪದಲ್ಲಿ

(8ನೇ ಪುಟಕ್ಕೆ)

سلسلة الأحاديث الضعيفة والموضوعة

# ದುರ್ಬಲ ಮತ್ತು ಕೃತಕ ಹದೀಸ್‌ಗಳು

## ಒಂದು ಅವಲೋಕನ ಭಾಗ - 13



ಎಂ.ಇ. ಅಶ್ರಫ್ ಮುಸ್ಲಿಯಾರ್
ಕಾಸರಗೋಡು

## ಎಪ್ಪತ್ತು ಸಾವಿರ ಲಹ್ಲೀಲ್ ಸಮರ್ಪಣೆ ನಿರರ್ಥಕ ಮತ್ತು ನಿರಾಧಾರ ಸಂಪ್ರದಾಯ

ಮೃತರ ಪರಲೋಕ ಸದ್ಗತಿಗಾಗಿ ಎಪ್ಪತ್ತು ಸಾವಿರ ತಹ್‌ಲೀಲ್ ಸಮರ್ಪಣೆ, ಖತ್ಮುಲ್ ಕುರ್‌ಆನ್ ಮುಂತಾದ ಬಿದ್‌ಅತ್‌ಗಳು ಸಮಾಜದಲ್ಲಿ ಹೆಚ್ಚುತ್ತಿದೆ.

ಮೂಲದಲ್ಲಿ ಎಪ್ಪತ್ತು ಸಾವಿರವಿದ್ದ ಸಂಖ್ಯೆ ಈಗ ಒಂದು ಕೋಟಿಗೆ ತಲುಪಿದೆ. ಒಂದೆಡೆ ಮಹಾತ್ಮರಿಗೆ ಮರಣವಿಲ್ಲ, ಅವರು ತೀರಿ ಹೋದರೂ ಆತ್ಮೀಯವಾಗಿ ನಮ್ಮನ್ನು ನಿಯಂತ್ರಿಸುತ್ತಿರುತ್ತಾರೆ. ಬದುಕಿರುವವರ ಸಂಕಷ್ಟಗಳನ್ನು ಪರಿಹರಿಸುವ, ದುಃಖಿತರಿಗೆ ಸಾಂತ್ವನವೀಯುವ, ಮುರೀದ್‌ಗಳಿಗೆ ಮಾರ್ಗದರ್ಶನ ಮಾಡುವ ಶಕ್ತಿಯನ್ನು ಪಡೆದಿರುತ್ತಾರೆ ಎಂಬ ವಿಕೃತ ಸಿದ್ಧಾಂತದ ಪ್ರಚಾರಕರಾಗಿರುವ ಪುರೋಹಿತರು ಮತ್ತೊಂದೆಡೆ "ಮೃತ ಮಹಾತ್ಮ'ನ ಹೆಸರಿನಲ್ಲಿ ಕೋಟಿ ಸ್ವಲಾತ್ ಸಮರ್ಪಣೆ. ಖತ್ಮುಲ್ ಕುರ್‌ಆನ್. ದ್ವಿಕ್ರ್ ಮಜ್ಲಿಸ್‌ಗಳ ಪ್ರವಾಹವನ್ನೇ ಹರಿಸುತ್ತಿರುವುದು ಸೋಜಿಗವಲ್ಲದೆ ಮತ್ತೇನು...!

ಸಮಾಜದಲ್ಲಿ ಒಂದು ಬಿದ್‌ಅತ್ ತಲೆ ಎತ್ತುವಾಗ ಒಂದು ಸುನ್ನತ್ ಮೃತವಾಗಿರುತ್ತದೆ ಎಂಬ ಸಹಾಬಿಯೊಬ್ಬರ ನುಡಿ ಅತ್ಯಂತ ಗಮನಾರ್ಹ.

ಸುನ್ನತ್ ಆದ ಪ್ರಾರ್ಥನೆಗಳನ್ನು ಕೈಬಿಟ್ಟು ಬಿದ್‌ಅತ್‌ಗಳತ್ತ ಹೊರಳಿದರೆ ಪವಿತ್ರ ಕುರ್‌ಆನ್ ಮತ್ತು ಸುನ್ನತ್ ಪ್ರಕಾರ ಮೃತನಿಗೆ ಸಲ್ಲಬೇಕಾದ ಯಾವುದೇ ಪ್ರಾರ್ಥನೆಯೂ ಪುರೋಹಿತ ಪ್ರಣೀತ ಸಿದ್ಧಾಂತದಡಿ ಮರಣ ಹೊಂದಿದವರಿಗೆ ದೊರೆಯುವುದಿಲ್ಲ ಎನ್ನುವುದು ಖುರಾಫಿ ಸಮುದಾಯಕ್ಕೆ ಒದಗಿದ ಬಹು ದೊಡ್ಡ ದೌರ್ಭಾಗ್ಯ ಎನ್ನಬಹುದು.

ಪವಿತ್ರ ಪ್ರಮಾಣಗಳಿಂದ ವ್ಯತಿಚಲಿಸಿದಾಗ ವ್ಯಕ್ತಿಯೊಬ್ಬ ತನ್ನ ಪಾರತ್ರಿಕ ಬದುಕನ್ನು ಕಳೆದುಕೊಳ್ಳುವನು ಎಂಬುದಕ್ಕೆ ಇದೊಂದು ನಿದರ್ಶನ. ಮೃತನಿಗಾಗಿ ಕೋಟಿ ತಹ್‌ಲೀಲ್ (ಲಾ ಇಲಾಹ ಇಲ್ಲಲ್ಲಾಹ್) ಸಮರ್ಪಿಸುವುದು ಬಿಡಿ, ಕನಿಷ್ಠ ಒಂದು ತಹ್ಲೀಲ್ ಹೇಳಿದರೂ ಅದರ ಪ್ರತಿಫಲ ಮೃತನಿಗೆ ದೊರೆಯಲಾರದು. ಕಾರಣ ಅಲ್ಲಾಹನಾಗಲೀ ಅವನ ಪ್ರವಾದಿಯಾಗಲೀ ನಮಗೆ ಇದನ್ನು ಕಲಿಸಿ ಕೊಟ್ಟಿಲ್ಲ.

ಹಾಗಾದರೆ ಮುಲ್ಲಾ-ಮೌಲಿಗಳನ್ನು ಮನೆಗೆ ಆಮಂತ್ರಿಸಿ ಮೃತನಿಗಾಗಿ ಎಪ್ಪತ್ತು ಸಾವಿರ ತಹ್‌ಲೀಲ್ ಸಮರ್ಪಣೆ ಮಾಡುವ ಕಾರ್ಯ ವ್ಯಾಪಕಗೊಳ್ಳಲು ಕಾರಣವೇನು?

ಒಂದು ಕೃತಕ ಹದೀಸ್ ಎಂದು ಧಾರಾಳವಾಗಿ ಹೇಳಬಹುದು.

ಈ ನಕಲಿ ಹದೀಸ್‌ನ ರೂಪ ಹೀಗಿದೆ ಯಾರು 70 ಸಾವಿರ ಬಾರಿ "ಲಾ ಇಲಾಹ ಇಲ್ಲಲ್ಲಾಹ್" ಎಂದು ಹೇಳುವರೋ ಅವರ ಮೇಲೆ ಅಲ್ಲಾಹು ನರಕವನ್ನು ನಿಷಿದ್ಧಗೊಳಿಸುವನು. ಇದು ದುರ್ಬಲವಷ್ಟೇ ಅಲ್ಲ, ಕೃತಕ ನಿರ್ಮಿತ (ಮೌದೂಅಕ್) ಅಪ್ಪಟ ನಕಲಿ ಹದೀಸ್, ಯಾರೋ ದುಷ್ಟರು ಪ್ರವಾದಿ(ಸ) ಅವರ ಹೆಸರಿನಲ್ಲಿ ಹೆಣೆದ ಕೃತಕ ಹದೀಸ್. ಈ ಬಗ್ಗೆ ಇಬ್ನು ಹಜರುಲ್ ಅಸ್ಕಲಾನಿ(ರ) ಅವರಲ್ಲಿ ವಿಚಾರಿಸಿದಾಗ "ಇದು ಸಹೀಹ್, ಹಸನ್, ದಈಫ್ ಯಾವುದೂ ಅಲ್ಲ, ಬದಲಾಗಿ ಇದೊಂದು ಕೃತಕ ಹದೀಸ್ ಎಂದರಲ್ಲದೆ ಈ ಹದೀಸ್‌ನ ನಿಜ ಸ್ಥಿತಿ ತಿಳಿಸದೆ ಇದನ್ನು ವರದಿ ಮಾಡುವುದು ಧರ್ಮಬದ್ಧವಲ್ಲ" ಎಂದು ಉತ್ತರಿಸಿದರು (ಅಲ್ನಜ್ಮುಲ್‌ಗೈದ್).

ಈ ಹದೀಸನ್ನು ಸಹೀಹ್ ಎಂದು ಸಾಕ್ಷ್ಯಪಡಿಸಿದ ಯಾವ ವಿದ್ವಾಂಸನೂ ಜಗತ್ತಿನಲ್ಲಿಲ್ಲ. ಆದರೆ ಈ ಕೃತಕ ಹದೀಸನ್ನು ಕಶ್‌ಫ್ (ಆತ್ಮೀಯ ಸಾಕ್ಷಾತ್ಕಾರ)ನ ಮೂಲಕ ಪ್ರಯೋಗ ಸಿದ್ಧಗೊಳಿಸಿ ಚಾಲ್ತಿಗೆ ತಂದವರು ಪಥಭ್ರಷ್ಟ ಸೂಫಿಗಳು.

ಕಶ್ಫ್‌ನ ಮೂಲಕ ತನ್ನ ಆಪ್ತರೊಬ್ಬರ ತಾಯಿ ನರಕದಲ್ಲಿ ಶಿಕ್ಷೆಗೊಳಗಾದ ಸನ್ನಿವೇಶ ಕಂಡ ಸೂಫಿಯೊಬ್ಬ ತಾನು ಪಠಿಸಿದ್ದ ಎಪ್ಪತ್ತು ಸಾವಿರ ತಹ್‌ಲೀಲ್‌ಗಳನ್ನು ಕೂಡಲೇ ಪ್ರಸ್ತುತ ಮೃತಳಿಗೆ ಹದ್‌ಯಾ ಮಾಡಿದಾಗ ಆಕೆ ನರಕ ವಿಮೋಚನೆಗೊಂಡಳಂತೆ. ಈ ಕಟ್ಟುಕಥೆಯನ್ನು ನಿರೂಪಿಸಿ ಪ್ರಸ್ತುತ ಹದೀಸ್ ಸಹೀಹ್ ಎಂದು ಭಾವಿಸಿದ ಸೂಫಿ ವರ್ಗವು ಎಪ್ಪತ್ತು ಸಾವಿರ ತಹ್ಲೀಲ್ ಪಠಿಸಿ ಹದ್‌ಯಾ ಮಾಡುವ ಸಂಪ್ರದಾಯವನ್ನು ವ್ಯಾಪಕಗೊಳಿಸಿತು.

ಹೇಗಿದೆ ಬಿದ್‌ಅತ್‌ನ ಉತ್ಪತ್ತಿ...?

ಸೂಫಿಗಳಿಗುಂಟಾಗುವ ಕಶ್‌ಫ್, ಇಲ್ಹಾಂ ಯಾವುದೂ ಶರೀಅತ್‌ನಲ್ಲಿ ಪುರಾವೆಯಲ್ಲ ಎಂಬುದು ಅಹ್ಲು ಸುನ್ನತ್‌ನ ವಿದ್ವಾಂಸರೆಲ್ಲರೂ ಅಂಗೀಕರಿಸುವ ತತ್ವ. ಹಿಜಿರಾ 500ಕ್ಕಿಂತ ಮೊದಲು ರಚಿತಗೊಂಡ ಯಾವುದೇ ಗ್ರಂಥಗಳಲ್ಲೂ ಈ ನಕಲಿ ಹದೀಸ್ ಇಲ್ಲದಿರುವುದರಿಂದ ಪ್ರಸ್ತುತ ತಹ್‌ಲೀಲ್ ಓದಿ ಹದ್‌ಯಾ ಮಾಡುವ ಪದ್ಧತಿ ಬಹಳ ತಡವಾಗಿ ಹುಟ್ಟಿಕೊಂಡಿರುವುದು ಮಾತ್ರ ವಾಸ್ತವ.

ಮರಣಾನಂತರದ ಸುನ್ನತ್ ಕರ್ಮಗಳ ಸಾಲಿಗೆ ಈ ತಹ್‌ಲೀಲ್ ಸಮರ್ಪಣೆ ಸೇರಿಲ್ಲ ಎಂಬುದನ್ನು ಕೆಲವು ವೇಳೆ ಸುನ್ನಿಗಳೇ ಒಪ್ಪಿಕೊಂಡಿದ್ದಾರೆ. ಸಂಸ್ಥಾನ ಸುನ್ನಿ ಮುಖಂಡ ನಜೀಬ್ ಮೌಲವಿ ಹೇಳುವುದು ಗಮನಿಸಿ. "ಓರ್ವ ವ್ಯಕ್ತಿ ತೀರಿಹೊದರೆ ಊರವರು ಆತನ ಹೆಸರಿನಲ್ಲಿ ಎಪ್ಪತು ಸಾವಿರ ತಹ್‌ಲೀಲ್ ಹೇಳಿರಬೇಕು. ಇದು ಅಧಿಕ ಸ್ಥಳಗಳಲ್ಲೂ ಶುಕ್ರವಾರ ಜುಮುಆದ ಬಳಿಕ ನಡೆಯುತ್ತದೆ. ಕೆಲವು ವಾರಗಳಲ್ಲಿ ಎರಡು ಮೂರು ವ್ಯಕ್ತಿ ಗಳನ್ನು ನರಕದಿಂದ ರಕ್ಷಿಸಿಕೊಳ್ಳಬೇಕಾದ ಪರಿಸ್ಥಿತಿ... ನಮ್ಮ ಇಮಾಮ್‌ಗಳಾರೂ ಇದನ್ನು ಮರಣಾ ನಂತರದ ಸುನ್ನತ್‌ಗಳ ಸಾಲಿಗೆ ಸೇರಿಸಿರುವುದಿಲ್ಲ."
(2013 ಬುಲ್‌ಬುಲ್, ಏಪ್ರಿಲ್ ತಿಂಗಳು)

---

# ಧಾರ್ಮಿಕ ಪ್ರಶ್ನೋತ್ತರಗಳು

## ಮೊಬೈಲ್ ಮೂಲಕ ತಲಾಖ್

❖ **ಮೊಬೈಲ್ ಫೋನಿನ ಮೂಲಕ ತಲಾಖ್‌ನ ಸಂದೇಶ ಕಳುಹಿಸಿದರೆ ತಲಾಖ್ ಸಂಭವಿಸುತ್ತದೆಯೇ?**

● ಹೌದು, ಮೊಬೈಲ್ ಮೂಲಕ ರವಾನಿಸಲಾಗುವ ಸಂದೇಶವು ವಿವಾಹ ವಿಚ್ಛೇದನೆಯನ್ನು ತಿಳಿಸುವ ಒಂದು ಮಾರ್ಗವಾಗಿರುವುದೇ ಇದಕ್ಕೆ ಕಾರಣ.

**-ಶೈಖ್ ಅಬ್ದುರಹ್‌ಮಾನ್ ನಾಸಿರ್**

## ನಮಾಝ್‌ಗೆ ಮೊದಲೇ ಮಳೆ ಸುರಿದರೆ

❖ **ಊರಿನಲ್ಲಿ ಬರಗಾಲ ಬಂದಾಗ ಜನರೆಲ್ಲ ಮಳೆಯ ನಮಾಝ್‌ಗಾಗಿ ಸಿದ್ಧತೆ ನಡೆಸಿದರು. ಇನ್ನೇನು ನಮಾಝ್ ನಿರ್ವಹಿಸಬೇಕು ಎಂಬಷ್ಟರಲ್ಲಿ ಮಳೆ ಸುರಿದರೆ ನಮಾಝ್ ನಿರ್ವಹಿಸಬೇಕೆಂದಿದೆಯೇ?**

● ಈ ವಿಷಯದಲ್ಲಿ ಅನುಸರಿಸಬೇಕಾದ ವಿಧಾನವನ್ನು ವಿದ್ವಾಂಸರು ಎರಡು ಬಗೆಯಲ್ಲಿ ವಿವರಿಸಿದ್ದಾರೆ.

1. ಮಳೆಯ ನಮಾಝ್‌ಗಾಗಿ ಮನೆಯಿಂದ ಹೊರಡಲನುವಾದಾಗ ಅಂದರೆ ಮನೆ ಬಿಟ್ಟು ಹೊರ ಹೋಗುವ ಮೊದಲೇ ಮಳೆ ಸುರಿದರೆ ಈ ಅನುಗ್ರಹಕ್ಕಾಗಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಬೇಕು.
2. ಇನ್ನು ಜನರು ಮನೆಯಿಂದ ಹೊರಟು ನಮಾಝ್ ನಿರ್ವಹಿಸುವ ಸಿದ್ಧತೆಯಲ್ಲಿರುವಾಗ ಮಳೆ ಬಂದರೆ ಅಲ್ಲಾಗನಿಗಾಗಿ ಇಸ್ತಿಸ್ಕಾದ ನಮಾಝ್ ಪೂರ್ಣಗೊಳಿಸಬೇಕು. (ಅಲ್‌ಮುಗ್ನಿ

**-ಶೈಖ್ ಮುಹಮ್ಮದ್ ಸಾಲಿಹ್ ಮುನಜ್ಜಿದ್**

## ಉಚ್ಛ ಸ್ವರದಲ್ಲಿ ಕುರ್‌ಆನ್ ಪಾರಾಯಣ

❖ **ಇತರರು ನಮಾಝ್ ಮಾಡುತ್ತಿರುವಾಗ ಮಸೀದಿಯಲ್ಲಿ ಏರು ಧ್ವನಿಯಲ್ಲಿ ಕುರ್‌ಆನ್ ಓದುವುದು ಸಮ್ಮತಾರ್ಹವೇ?**

● ಧ್ವನಿ ಎತ್ತಿ ಕುರ್‌ಆನ್ ಓದುವುದರಿಂದ ನಮಾಝ್‌ಗಾರರಿಗೆ ಅಥವಾ ಇತರ ಕುರ್‌ಆನ್ ಪಾರಾಯಣ ಮಾಡುವವರಿಗೆ ತೊಂದರೆಯಾಗುವುದಾದರೆ ಮೇಲು ಧ್ವನಿಯಲ್ಲಿ ಓದಬೇಕು ಎಂಬುದು ಇಸ್ಲಾಮಿನ ನಿಯಮ. ಇತರರಿಗೆ ಉಪದ್ರವವಾಗದಂತೆ ಶಬ್ಧ ಎತ್ತದಿರುವುದು ಸುನ್ನತ್ ಕೂಡಾ. ಒಮ್ಮೆ ಪ್ರವಾದಿ(ಸ) ರವರು ಮಸೀದಿಯಲ್ಲಿ ಜನರು ಜೋರಾಗಿ ಕುರ್‌ಆನ್ ಓದುತ್ತಿರುವುದನ್ನು ಕಂಡಾಗ "ನೀವು ಸಂಭಾಷಣೆ ನಡೆಸುತ್ತಿರುವುದು ಅಲ್ಲಾಹನೊಂದಿಗೆ, ಆದ್ದರಿಂದ ಪರಸ್ಪರ ಶಬ್ಧ ಕೋಲಾಹಲ ಮಾಡಬೇಡಿ" ಎಂದರು. (ಹದೀಸ್)

**-ಶೈಖ್ ಇಬ್ನ್‌ಬಾಝ್**

## ಮುಸ್ಲಿಮೇತರರಿಗೆ ಸಲಾಮ್

❖ **ಮುಸ್ಲಿಮೇತರರು ಸಲಾಮ್ ಹೇಳಿದರೆ ವ ಅಲೈಕುಂ ಅಥವಾ ಸಲಾಮುನ್ ಅಲಾ ಮನಿತ್ತಬಅಲ್ ಹುದಾ ಎಂದು ಉತ್ತರಿಸಬೇಕು ಎನ್ನುವುದನ್ನು ಕೇಳಿದ್ದೇನೆ. ನನ್ನ ಸಂದೇಹವೇನೆಂದರೆ ನಾವಾಗಿಯೇ ಅನ್ಯ ಮತೀಯರಿಗೆ ಸಲಾಮ್ ಹೇಳಬಹುದೇ? ಅದೇ ರೀತಿ ಮುಸ್ಲಿಮರು ಅಮುಸ್ಲಿಮರೂ ಜತೆಯಾಗಿ ಬರುವ ಗುಂಪಿಗೆ ಹೇಗೆ ಸಲಾಮ್ ಹೇಳಬೇಕು?"**

(5ನೇ ಪುಟಕ್ಕೆ)




✍ ಪ್ರೊ ಪಿ. ಅಬ್ದುಲ್ಲ.
ಕನ್ನಡಕ್ಕೆ: ಇಬ್‌ನು ಮೊಹಿದ್ದೀನ್

# ಸಂಕಷ್ಟದ ಸಂದರ್ಭಗಳಲ್ಲಿ

كَانَ رَسُولُ اللهِ ﷺ يَقُولُ عِنْدَ الكَرْبِ : (لاَ إِلَهَ إِلاَّ اللهُ العَظِيمُ الحَلِيمُ لاَ إِلَهَ إِلاَّ اللهُ ربُّ العرْشِ العَظِيمِ، لاَ إِلَهَ إِلاَّ اللهُ رَبُّ السَّمَوَاتِ وَرَبُّ الأَرْضِ وَرَبُّ العَرْشِ الكَرِيمِ). (البخاري ومسلم)

ರಸೂಲುಲ್ಲಾಹಿ(ಸ)ರು ಸಂಕಷ್ಟದ ಸಂದರ್ಭಗಳಲ್ಲಿ ಹೀಗೆ ಹೇಳುತ್ತಿದ್ದರು: "ಮಹಾನನೂ ಪ್ರಶಾಂತನೂ ಆದ ಅಲ್ಲಾಹನ ಹೊರತು ಬೇರಾವ ಆರಾಧ್ಯನೂ ಇಲ್ಲ. ಮಹತ್ತರವಾದ ರಾಜಪೀಠದ ಒಡೆಯನಾದ ಅಲ್ಲಾಹನ ಹೊರತು ಬೇರಾವ ಆರಾಧ್ಯನೂ ಇಲ್ಲ. ಭೂಮಿ-ಆಕಾಶಗಳ ಒಡೆಯನೂ ಮಾಹಾತ್ಮ್ಯತೆಯಿರುವ ರಾಜಪೀಠದ ಒಡೆಯನೂ ಆದ ಅಲ್ಲಾಹನ ಹೊರತು ಬೇರಾವ ಆರಾಧ್ಯನೂ ಇಲ್ಲ" (ಬುಖಾರಿ, ಮುಸ್ಲಿಮ್).

عن النَّبي ﷺ : أَنَّهُ كَانَ إِذَا حَزَبَهُ أَمْرٌ قَالَ : (يَا حَيُّ يَا قَيُّومُ بِرَحْمَتِكَ أَسْتَغِيثُ) (الترمذي)

ಪ್ರವಾದಿ(ಸ)ರಿಂದ: "ಅವರಿಗೇನಾದರೂ ಸಮಸ್ಯೆಗಳು ಎದುರಾದರೆ ಅವರು ಹೀಗೆ ಹೇಳುತ್ತಿದ್ದರು - ಎಂದೆಂದೂ ಜೀವಿಸಿರುವವನು ಮತ್ತು ಎಲ್ಲರನ್ನೂ ನಿಯಂತ್ರಿಸುವವನೇ, ನಿನ್ನ ಕರುಣೆಯಿಂದ ನಾನು ಸಹಾಯ ಯಾಚಿಸುತ್ತೇನೆ" (ತಿರ್ಮುದಿ).

عن أبي بكرة رضى الله عنه أنَّ رَسُولُ اللهِ ﷺ قَالَ : دَعْوَاتُ المَكْرُوبِ: (اللَّهُمَّ رَحْمَتَكَ أَرْجُوا، فَلاَ تَكِلْنِي إِلَى نَفْسِي طَرْفَةَ عَيْنٍ، وَأَصْلِحْ لِي شَأْنِي كُلَّهُ، لاَ إِلَهَ إِلاَّ أَنْتَ) (ابوداود)

ಅಬೂಬಕರ್(ರ)ರಿಂದ ವರದಿ: ರಸೂಲ್(ರ)ರು ಹೇಳಿದರು - ಸಂಕಷ್ಟದಲ್ಲಿರುವವರ ಪ್ರಾರ್ಥನೆಗಳು ಈ ರೀತಿಯಾಗಿದೆ - ಅಲ್ಲಾಹನೇ, ನಿನ್ನ ಕಾರುಣ್ಯವನ್ನು ನಾನು ಯಾಚಿಸುತ್ತೇನೆ. ಆದ್ದರಿಂದ ಒಂದು ನಿಮಿಷ ಕೂಡಾ ನನ್ನನ್ನು ನನಗೇ ವಹಿಸಿಕೊಡಬೇಡ. ನನ್ನ ಎಲ್ಲಾ ಕಾರ್ಯಗಳನ್ನು ನನಗೆ ಉತ್ತಮಗೊಳಿಸಿ ಕೊಡು. ನಿನ್ನ ಹೊರತು ಯಾವ ಆರಾಧ್ಯನೂ ಇಲ್ಲ (ಅಬೂದಾವೂದ್, ಇಬ್‌ನು ಹಿಬ್ಬಾನ್).

قَال رَسُولُ اللهِ ﷺ لأَسْمَاءَ بِنْتِ عُمَيْسٍ: (أَلاَ أُعَلِّمُكِ كَلِمَاتٍ تَقُولِينَهُنَّ عِنْدَ الكَرْبِ-أَوْفِي الكَرْبِ-(اللهُ، اللهُ رَبِّي لاَ أُشْرِكُ بِهِ شَيْئًا) وَفِي رِوَايَةٍ أَنَّهَا تُقَالُ سَبْعَ مَرَّاتٍ. (ابوداود)

ರಸೂಲ್(ಸ)ರು ಅಸ್ಮಾಬಿಂತ್ ಉಮೈಸ್(ರ)ರೊಡನೆ ಹೇಳಿದರು: "ನೀನು ಸಂದಿಗ್ಧ ಸ್ಥಿತಿಯಲ್ಲಿ ಅಥ‌ವಾ ಸಂಕಷ್ಟದಲ್ಲಿರುವಾಗ ಹೇಳಬೇಕಾದ ಮಾತುಗಳನ್ನು ನಾನು ನಿನಗೆ ಹೇಳಿ ಕೊಡಲೇ? ಓ ಅಲ್ಲಾಹ್, ನನ್ನ ಒಡೆಯನಾದ ಅಲ್ಲಾಹು, ಅವನೊಂದಿಗೆ ನಾವು ಯಾವುದನ್ನೂ ಸಹಭಾಗಿಯಾಗಿ ಮಾಡುವುದಿಲ್ಲ". ಇನ್ನೊಂದು ವರದಿಯಲ್ಲಿ ಅದನ್ನು ಏಳು ಬಾರಿ ಹೇಳಬೇಕೆಂದಿದೆ (ಅಬೂದಾವೂದ್).

قَالَ رَسُولُ اللهِ ﷺ دَعْوَةُ ذِي النُّونِ إِذْ دَعَابِهَا وَهُوَ فِي بَطْنِ الحُوتِ : (لاَ إِلَهَ إِلاَّ أَنْتَ، سُبْحَانَكَ إِنِّي كُنْتُ مِنَ الظَّالِمِينَ) لَمْ يَدْعُ بِهَا رَجُلٌ مُسْلِمٌ فِي شَيْءٍ قَطُّ إِلاَّ اسْتَجَابَ اللهُ لَهُ (الترمذى واحمد)

ರಸೂಲುಲ್ಲಾಹಿ(ಸ)ರು ಹೇಳಿದರು: "ಮೀನಿನ ಹೊಟ್ಟೆಯಲ್ಲಿರುವಾಗ ದುನ್ನೂನ್[ಯೂನುಸ್(ಅ)] ಪ್ರಾರ್ಥಿಸಿದ ಪ್ರಾರ್ಥನೆ - ನಿನ್ನ ಹೊರತು ಯಾವ ಆರಾಧ್ಯನೂ ಇಲ್ಲ. ನೀನು ಮಹಾ ಪರಿಶುದ್ಧನು. ನಿಶ್ಚಯವಾಗಿಯೂ ನಾನು ಅಕ್ರಮಿಗಳಲ್ಲಾಗಿ ಬಿಟ್ಟೆ. ಮುಸ್ಲಿಮ್ ಆದ ಒಬ್ಬನು ಯಾವುದಾದರೂ ವಿಷಯದಲ್ಲಿ ಹೀಗೆ ಪ್ರಾರ್ಥಿಸಿದರೆ ಅಲ್ಲಾಹು ಅದಕ್ಕೆ ಉತ್ತರಿಸದಿರಲಾರ" (ತಿರ್ಮುದಿ, ಅಹ್ಮದ್).

عن النَّبي ﷺ قَالَ: مَا أَصَابَ عَبْدًا هَمٌّ وَلاَحُزْنٌ فَقَالَ: (اللَّهُمَّ إِنِّي عَبْدُكَ، وَابْنُ عَبْدِكَ نَاصِيَتِي بِيَدِكَ، مَاضٍ فِيَّ حُكْمُكَ، عَدْلٌ فِيَّ قَضَاؤُكَ، أَسْأَلُكَ بِكُلِّ اسْمٍ هُوَلَكَ سَمَّيْتَ بِهِ نَفْسَكَ أَوْ أَنْزَلْتَهُ فِي كِتَابِكَ أَوْ عَلَّمْتَهُ أَحَدًا مِنْ خَلْقِكَ، أَوْ اسْتَأْثَرْتَ بِهِ فِي عِلْمِ الغَيْبِ عِنْدَكَ، أَنْ تَجْعَلَ القُرْآنَ رَبِيعَ قَلْبِي، وَنُورَ صَدْرِي، وَجَلاَءَ حُزْنِي، وَذَهَابَ هَمِّي) إِلاَّ أَذْهَبَ اللهُ هَمَّهُ وَحُزْنَهُ، وَأَبْدَ لَهُ مَكَانَهُ فَرَجًا. (احمد وابن حبّان)

ಪ್ರವಾದಿ(ಸ)ರಿಂದ: ಅವರು ಹೇಳಿದರು - "ಮುಂದೆ ಹೇಳಲಾಗುವ ರೀತಿಯಲ್ಲಿ ಹೇಳುವ ಅಲ್ಲಾಹನ ಒಬ್ಬ ದಾಸನನ್ನು ಮನಃಕ್ಲೇಷವಾಗಲಿ, ದುಃಖವಾಗಲಿ ತೊಂದರೆಗೊಳಿಸದು. ಓ ಅಲ್ಲಾಹ್, ನಾನು ನಿನ್ನ ದಾಸನಾಗಿದ್ದೇನೆ. ನಿನ್ನ ದಾಸನ ಮಗನಾಗಿದ್ದೇನೆ. ನಿನ್ನ ದಾಸಿಯ ಮಗನಾಗಿದ್ದೇನೆ. ನಾನು ನಿನ್ನ ಅಧೀನದಲ್ಲಿದ್ದೇನೆ. ನನ್ನ ಮೇಲೆ ನಿನ್ನ ವಿಧಿ ಜಾರಿಗೊಳ್ಳುತ್ತಿದೆ. ನನ್ನ ಕುರಿತಾದ ನಿನ್ನ ತೀರ್ಮಾನವು ನ್ಯಾಯಪೂರ್ವಕವಾಗಿದೆ. ನೀನು ಸ್ವತಃ ನಾಮಕರಣ ಮಾಡಿದ ನಿನ್ನ ಎಲ್ಲಾ ನಾಮಗಳಿಂದ ಅಥವಾ ನಿನ್ನ ಗ್ರಂಥದಲ್ಲಿ ನೀನು ಅವತೀರ್ಣಗೊಳಿಸಿದ ಅಥವಾ ನಿನ್ನ ಸೃಷ್ಟಿಗಳ ಪೈಕಿ ಯಾವುದಾದರೊಂದಕ್ಕೆ ನೀನು ಕಲಿಸಿದ ಅಥವಾ ನಿನ್ನ ಅದೃಶ್ಯ ಜ್ಞಾನದಲ್ಲಿ ನಿನ್ನ ಬಳಿಯಲ್ಲೇ ನೀನು ಸಂರಕ್ಷಿಸಿದ ಕುರ್‌ಆನನ್ನು ನನ್ನ ಹೃದಯದ ವಸಂತವಾಗಿಸಲಿಕ್ಕಾಗಿ ಮತ್ತು ನನ್ನ ಎದೆಯ ಪ್ರಕಾಶವಾಗಿಸಲಿಕ್ಕಾಗಿ ಮತ್ತು ನನ್ನ ದುಃಖವನ್ನು ನಿವಾರಿಸುವಂಥದ್ದಾಗಿಸಲಿಕ್ಕಾಗಿ ಮತ್ತು ನನ್ನ ಮನೋವ್ಯಥೆಯನ್ನು ದೂರೀಕರಿಸುವಂಥದ್ದಾಗಿಸಲಿಕ್ಕಾಗಿ ನಾನು ನಿನ್ನೊಡನೆ ಬೇಡುತ್ತೇನೆ. ಅಲ್ಲಾಹು ಅವನ ಮನಃಕ್ಲೇಷ ಮತ್ತು ದುಃಖವನ್ನು ದೂರೀಕರಿಸದ ಹಾಗೂ ಸಂಕಷ್ಟದಿಂದ ವಿಮೋಚನೆ ನೀಡದ ವಿನಾ (ಪ್ರಾರ್ಥನೆಯನ್ನು ವ್ಯರ್ಥಗೊಳಿಸಲಾರ)" (ಅಹ್ಮದ್, ಇಬ್‌ನು ಹಿಬ್ಬಾನ್). (ಮುಂದುವರಿಯುವುದು)

---

# ಧಾರ್ಮಿಕ ಪ್ರಶ್ನೋತ್ತರಂಗಳು

(4ನೇ ಪುಟದಿಂದ)

- ಅನ್ಯಮತೀಯರಿಗೆ "ಅಸ್ಸಲಾಮು ಅಲೈಕುಮ್" ಎನ್ನುವ ಬದಲು "ಸಲಾಮುನ್ ಅಲಾಮನಿತ್ತಬ ಅಲ್ ಹುದಾ" (ಸನ್ಮಾರ್ಗ ಸ್ವೀಕರಿಸಿದವರಿಗೆ ಅಲ್ಲಾಹ್‌ನ ಶಾಂತಿ ಇರಲಿ) ಎಂದು ಹೇಳಬಹುದು. ಪ್ರವಾದಿ(ಸ) ಅವರು ರೋಮ್ ಮತ್ತು ಪರ್ಷಿಯಾದ ದೊರೆಗಳಿಗೆ ಇಸ್ಲಾಮಿನ ಸಂದೇಶ ತಿಳಿಸಿ ಪತ್ರ ಕಳುಹಿಸಿದಾಗ ಅದರ ಪ್ರಾರಂಭದಲ್ಲಿ ಮೇಲಿನಂತೆ ಸಲಾಮನ್ನು ಉಲ್ಲೇಖಿಸಲಾಗಿತ್ತು. ಅಮುಸ್ಲಿಮರು ನಿಮಗೆ ಸಲಾಮ್ ಹೇಳದೆಯೇ ನೀವು ಅವರಿಗಾಗಿ ಸಲಾಮನ್ನು ಪ್ರಾರಂಭಿಸ ಬಾರದು ಎಂಬ ಹದೀಸನ್ನು ಇಮಾಮ್ ಮುಸ್ಲಿಮ್ ವರದಿ ಮಾಡಿದ್ದಾರೆ. ಮುಸ್ಲಿಮರೂ ಅಮುಸ್ಲಿಮರೂ ಒಟ್ಟಾಗಿರುವ ಗುಂಪಿಗೆ ಅಸ್ಸಲಾಮು ಅಲೈಕುಮ್ ಎಂದೇ ಸಲಾಮ್ ಹೇಳಬೇಕು. ಪ್ರವಾದಿ(ಸ)ರವರು ಹೀಗೆ ಸಲಾಮ್ ಹೇಳಿದ್ದಾಗಿ ಸಹಾಬಿ ಉಸಾಮ(ರ) ಪ್ರಸ್ತಾಪಿಸಿದ್ದಾರೆ (ಬುಖಾರಿ, ಮುಸ್ಲಿಮ್).

-ಶೈಖ್ ಮಹಮ್ಮದ್ ಅಹ್ಮದ್ ಮೀರ್‌ಪುರಿ

## ಜುಮುಆಕ್ಕೆ ಎಷ್ಟು ಮಂದಿ

❖ **ಜುಮುಅ ನಮಾಝ್ ಮತ್ತು ಶುಕ್ರವಾರದ ಖುತುಬ ಸಿಂಧುವಾಗಲು ಕನಿಷ್ಠ ಎಷ್ಟು ಜನರಿರಬೇಕು?**

- ಈ ವಿಷಯದಲ್ಲಿ ವಿದ್ವಾಂಸರ ಮಧ್ಯೆ ಅಭಿಪ್ರಾಯ ಭಿನ್ನತೆಗಳಿವೆ. ಅತ್ಯಂತ ಸ್ವೀಕೃತವಾದ ಅಭಿಪ್ರಾಯ ಪ್ರಕಾರ ಮೂರು ಮಂದಿ ಇರಬೇಕು. ಅಂದರೆ ಇಮಾಮ್ ಮತ್ತು ಇತರೆ ಇಬ್ಬರು, ಇದರನ್ವಯ ಒಂದು ಗ್ರಾಮದಲ್ಲಿ ಪ್ರಾಪ್ತ ವಯಸ್ಕರೂ ಸ್ವತಂತ್ರರೂ ಮೂಲ ನಿವಾಸಿಗಳೂ ಆದ ಮೂರು ಮಂದಿ ಇದ್ದರೆ ಅವರು ಜುಮುಅ ನೆಲೆಗೊಳಿಸಬೇಕು. ಜುಮುಅದ ಕುರಿತು ವರದಿಯಾಗಿರುವ ಪ್ರಮಾಣಗಳನ್ನು ಅಧ್ಯಯನ ಮಾಡುವಾಗ ಮೂವರು ಮತ್ತು ಅದಕ್ಕಿಂತ ಅಧಿಕ ಜನರಿಗೆ ಜುಮಾ ಕಡ್ಡಾಯ ಎಂದು ಗ್ರಾಹ್ಯವಾಗುತ್ತದೆ.

-ಇಬ್ನ್ ಬಾಝ್

## ಮುಸ್‌ಹಫ್ ಚುಂಬಿಸುವುದು

❖ **ಕುರ್‌ಆನ್ ಓದಿ ಆದ ಬಳಿಕ ಮುಸ್‌ಹಫ್ ಚುಂಬಿಸಬಹುದೇ?**

- ಕುರ್‌ಆನ್ ಅತ್ಯಂತ ಪವಿತ್ರ ಗ್ರಂಥ. ಅದನ್ನು ಗೌರವಿಸಬೇಕಾದುದು ನಮ್ಮೆಲ್ಲರ ಕರ್ತವ್ಯ. ಕುರ್‌ಆನ್‌ಗೆ ಸಲ್ಲಿಸಲಾಗುವ ನಿಜವಾದ ಗೌರವವಾದರವೆಂದರೆ ಆ ಪವಿತ್ರ ಗ್ರಂಥದ ಆಶಯಾದರ್ಶಗಳನ್ನು ಯಥಾವತ್ತಾಗಿ ಜೀವನದಲ್ಲಿ ಅಳವಡಿಸಿಕೊಳ್ಳುವುದಾಗಿದೆ. ಕುರ್‌ಆನ್ ಅವತೀರ್ಣವಾದ ಉದ್ದೇಶವು ಈ ಗ್ರಂಥವನ್ನು ಕೈಗೆತ್ತಿಕೊಂಡು ಚುಂಬಿಸುವುದಲ್ಲ. ಅದರ ಬದಲು ಅದನ್ನು ಓದಿ, ಅರ್ಥೈಸಿ, ಅದರಲ್ಲಿ ಬೋಧಿಸಿರುವಂತೆ ಬದುಕನ್ನು ರೂಪಿಸಿಕೊಳ್ಳುವುದು. ಪ್ರವಾದಿ(ಸ)ರವರಾಗಲೀ ಅವರ ಸಹಾಬಿಗಳಾಗಲಿ ಕುರ್‌ಆನ್ ಓದುವುದಕ್ಕೆ ಮೊದಲೋ ಓದಿದ ನಂತರವೋ ಅದನ್ನು ಚುಂಬಿಸಿದ ನಿದರ್ಶನವಿಲ್ಲ. ನಾವು ಕೂಡಾ ಅವರ ಆದರ್ಶ ಹಾಗೂ ನಡವಳಿಕೆಗಳನ್ನು ಅನುಸರಿಸಬೇಕು. ಕುರ್‌ಆನ್ ಗ್ರಂಥವನ್ನು ಗೌರವಿಸಲಿಕ್ಕಾಗಿ ಇತರ ಅನೇಕ ವಿಧಾನಗಳನ್ನು ವಿದ್ವಾಂಸರು ಸೂಚಿಸಿದ್ದಾರೆ. ಆದರೆ ಮುಸ್‌ಹಫ್ ಚುಂಬಿಸುವುದನ್ನು ಯಾರೂ ಕುರ್‌ಆನ್‌ನ ಗೌರವದ ಭಾಗವಾಗಿ ಪರಿಗಣಿಸಿಲ್ಲ. ಏಕೆಂದರೆ ಅದಕ್ಕೆ ಯಾವುದೇ ಆಧಾರವಿಲ್ಲ.

-ಶೈಖ್ ಮಹ್‌ಮೂದ್ ಅಹ್ಮದ್ ಮೀರ್‌ಪುರಿ

# ಪ್ರವಾದಿ(ಸ)ರನ್ನು ನಿಂದಿಸುವ ಮೀಲಾದುನ್ನಬಿ, ಮೀಲಾದ್ ಫೆಸ್ಟ್‌ಗಳು!

ಸಮಸ್ತ ಮಾನವ ರಾಶಿಗೆ ಮಾರ್ಗ ದರ್ಶಕರಾಗಿ ಅಲ್ಲಾಹನಿಂದ ನಿಯೋಗಿಸಲ್ಪಟ್ಟ ಪ್ರವಾದಿ ಮುಹಮ್ಮದ್ ಮುಸ್ತಫಾ(ಸ)ರು ವಫಾತ್ ಆದ ರಬೀವುಲ್ ತಿಂಗಳ 12ನ್ನು ಪ್ರವಾದಿ ಜನ್ಮದಿನವೆಂಬ ಸುಳ್ಳನ್ನು ಸೃಷ್ಟಿಸಿ, ಆ ತಿಂಗಳಲ್ಲಿ ಮಸೀದಿ, ಮದ್ರಸ, ರಸ್ತೆಗಳನ್ನು ಸಿಂಗರಿಸಿ ಜೀಪು, ಟೆಂಪೋ, ಲಾರಿ, ಆಟೋ ರಿಕ್ಷಾಗಳಲ್ಲಿ ತಲೆಗೆ ಹಸಿರು ಬಟ್ಟೆ ಸುತ್ತಿದ ಯುವಕರನ್ನು, ಮಕ್ಕಳನ್ನು ತುಂಬಿಸಿ ಮೀಲಾದ್ ರ್‍ಯಾಲಿ ಮಾಡಿ ರಸ್ತೆ ತಡೆ ನಿರ್ಮಿಸಿ ಪ್ರವಾದಿ ಜನ್ಮದಿನ ಆಚರಿಸಿದ್ದನ್ನು ನೋಡಿದ್ದೇವೆ. ಕೆಲವೆಡೆ ಮೀಲಾದ್ ಮೆರವಣಿಗೆಯಲ್ಲಿ ತಾಲೀಮು, ಬೆಂಕಿಯುಗುಳುವ ಕಸರತ್ತುಗಳನ್ನು ಪ್ರದರ್ಶಿಸಿದ್ದಾರೆ. ಎಲ್ಲೋ ಒಂದೆಡೆ ಕೋಣನಿಗೆ ಹಸಿರು ಬಣ್ಣ ಕೊಟ್ಟು, ಅದರ ಹಣೆಯಲ್ಲಿ ಅರ್ಧಚಂದ್ರ ಮತ್ತು ನಕ್ಷತ್ರದ ಚಿತ್ರ ಬಿಡಿಸಿ ಮೀಲಾದ್ ಮೆರವಣಿಗೆ ಮಾಡಿದ್ದಾರೆ. ಇನ್ನೊಂದೆಡೆ ಬೈಕ್, ಸ್ಕೂಟರ್‌ಗಳಿಗೆ ಹಸಿರು ಪೈಂಟ್ ಕೊಟ್ಟು ಮೀಲಾದ್ ರ್‍ಯಾಲಿ ಮಾಡಿದ್ದಾರೆ. ಕೆಲವೆಡೆ ಚಿಕ್ಕ ಮಕ್ಕಳಿಗೆ ಅರಬಿ ಡ್ರೆಸ್ ಹಾಕಿ, ಒಂಟೆ, ಕುದುರೆ ಮತ್ತು ತೆರೆದ ಜೀಪುಗಳಲ್ಲಿ 'ಬಾಲ ಮುಹಮ್ಮದ್' ಟ್ಯಾಬ್ಲೋ ಪ್ರದರ್ಶಿಸಿದ್ದಾರೆ. ಜೊತೆಗೆ ಟಿಪ್ಪುಸುಲ್ತಾನ್ ಟ್ಯಾಬ್ಲೋ ಪ್ರದರ್ಶನವೂ ಇತ್ತು. ಇನ್ನು ಕೆಲವೆಡೆ ಹಸಿರು ಬಾವುಟ, ಹಸಿರು ಶರ್ಬತ್ ಹಂಚಿ ಪ್ರವಾದಿ ಪ್ರೇಮ ಪ್ರದರ್ಶಿಸಿದ್ದಾರೆ. ಇದು ಕಪಟ ಪ್ರವಾದಿ ಪ್ರೇಮವಾಗಿದೆ.

ಕಪಟ ಪ್ರವಾದಿ ಪ್ರೇಮಿಗಳು ಮೀಲಾದುನ್ನಬಿಯೆಂಬ ಇಸ್ಲಾಮೇತರ ಆಚರಣೆಯ ಮೂಲಕ ಡೆನ್ಮಾರ್ಕ್‌ನ ಕಾರ್ಟೂನ್‌ಗಿಂತಲೂ ನಿಕೃಷ್ಟವಾಗಿ, ಸಲ್ಮಾನ್ ರುಶ್ದಿಗಿಂತಲೂ ಹೀನಾಯವಾಗಿ ಪ್ರವಾದಿ(ಸ)ರನ್ನು ಬೀದಿ ಬೀದಿಗಳಲ್ಲಿ ಅಪಮಾನಿಸುತ್ತಿದ್ದಾರೆ. ಇಸ್ಲಾಮಿನ ಶತ್ರುಗಳು ಸಹ ಮಾಡದಂತಹ ರೀತಿಯಲ್ಲಿ ಪ್ರವಾದಿ ಮುಹಮ್ಮದ್(ಸ)ರನ್ನು ಬಹಿರಂಗವಾಗಿ ನಿಂದಿಸುತ್ತಿರುವ ನಕಲಿ ಸುನ್ನಿಗಳ ಈ ಪೈಶಾಚಿಕ ಕೃತ್ಯಗಳಿಗೆ ಮೀಲಾದುನ್ನಬಿ, ಮೀಲಾದ್ ಫೆಸ್ಟ್, ಮೀಲಾದ್ ರ್‍ಯಾಲಿ, ಹುಬ್ಬೇ ರಸೂಲ್, ಇಶ್ಕೇ ರಸೂಲ್ ಎಂಬಿತ್ಯಾದಿ ಹೆಸರುಗಳನ್ನಿಡಲಾಗಿದೆ.

ಈದ್ ಮೀಲಾದ್ ಅಥವಾ ಮೀಲಾದುನ್ನಬಿ ಎಂಬುದು ಇಸ್ಲಾಮಿನ ಆಚರಣೆಯಲ್ಲ. ಈದ್ ಮೀಲಾದ್‌ಗೂ ಇಸ್ಲಾಮ್ ಧರ್ಮಕ್ಕೂ ಯಾವುದೇ ಸಂಬಂಧವಿಲ್ಲ. ಪ್ರವಾದಿ(ಸ)ರ ಜನನದ ಸುದ್ದಿ ಕೇಳಿದ ಅಬೂಲಹಬ್ ಸಂತೋಷಭರಿತನಾಗಿ ತನ್ನ ದಾಸಿಯನ್ನು ಸ್ವತಂತ್ರಗೊಳಿಸಿ ಬಿಟ್ಟನೆಂದೂ ಅದಕ್ಕಾಗಿ ಅಬೂಲಹಬನಿಗೆ ಪ್ರತೀ ಸೋಮವಾರ ನರಕದಲ್ಲಿ ತಂಪು ಪಾನೀಯ ನೀಡಲಾಗುತ್ತದೆಯೆಂದೂ ಪ್ರಸ್ತಾಪಿಸಲಾದ ನಕಲಿ ಹದೀಸೊಂದರ ಆಧಾರದಲ್ಲಿ ಸುನ್ನೀ ನಾಮಧಾರಿಗಳು ಮೀಲಾದುನ್ನಬಿ ಆಚರಿಸುತ್ತಿದ್ದಾರೆಯೇ ವಿನಾ ಪವಿತ್ರ ಕುರ್‌ಆನಿನಲ್ಲಾಗಲಿ, ಪ್ರವಾದೀ ಸುನ್ನತ್‌ನಲ್ಲಾಗಲಿ ಯಾವುದೇ ಆಧಾರವಿಲ್ಲ. ಇಸ್ಲಾಮಿನಲ್ಲಿ ಯಾರದೇ ಜನ್ಮದಿನ ಅಥವಾ ಮರಣ ದಿನಗಳಿಗೆ ಮಹತ್ವವಿಲ್ಲ. ಇದ್ದಿದ್ದರೆ ಪ್ರವಾದಿ ಈಸಾ(ಅ)ರವರ ಜನ್ಮ ದಿನವಾದ ಕ್ರಿಸ್ಮಸ್ಸನ್ನು ಕೂಡಾ ಮೀಲಾದ್‌ವಾದಿಗಳು ಕ್ರೈಸ್ತರ ಜತೆಗೂಡಿ ಆಚರಿಸಬೇಕು. ಏಕೆಂದರೆ ಪ್ರವಾದಿಗಳ ಮಧ್ಯೆ ತಾರತಮ್ಯ ತೋರಿಸಬಾರದೆಂದು ಇಸ್ಲಾಮ್ ಕಲಿಸುತ್ತದೆ.

ಪ್ರವಾದಿ(ಸ)ರ ಮದ್‌ಹ್‌ಗಳೆಂದು ರಬೀವುಲ್ ತಿಂಗಳಲ್ಲಿ ಮತ್ತಿತರ ವಿಶೇಷ ಸಂದರ್ಭಗಳಲ್ಲಿ ಹಾಡಲಾಗುವ ಗದ್ಯ, ಪದ್ಯ ಮಿಶ್ರಿತ ಮಂಕೂಸ್ ಮೌಲೀದ್, ಶರಫಲ್ ಅನಾಂ ಮೌಲೀದ್, ಬುರ್ದಾ ಬೈತ್ ಮುಂತಾದ ಕಟ್ಟುಕಥೆಗಳು ಜನರನ್ನು ಮುಶ್ರಿಕರನ್ನಾಗಿ ಮಾಡಿ ನೇರವಾಗಿ ನರಕಕ್ಕೆ ಕೊಂಡೊಯ್ಯುವ ಶಿರ್ಕ್‌ನ ಶಿಖರಗಳಾಗಿವೆ. ಈ ಮೌಲೀದ್, ಬುರ್ದಾ ಬೈತ್‌ಗಳಲ್ಲಿ ಪ್ರವಾದಿ(ಸ)ರನ್ನು ಅಮಿತವಾಗಿ ಪ್ರಶಂಸಿಸಿ ಅಲ್ಲಾಹನ ಸ್ಥಾನಕ್ಕೇರಿಸಿ ಅವರೊಡನೆಯೇ ಪ್ರಾರ್ಥಿಸಲಾಗುತ್ತದೆ. ಬುರ್ದಾ ಬೈತ್‌ನಲ್ಲಿ ಹೇಳುವುದನ್ನು ನೋಡಿರಿ. "ನಿಶ್ಚಯವಾಗಿಯೂ ಇಹಲೋಕ ಮತ್ತು ಪರಲೋಕಗಳು ತಮ್ಮ ಔದಾರ್ಯವಾಗಿದೆ. ಲೌಹುಲ್ ಮಹ್‌ಫೂಳ್ ಮತ್ತು ಖಲಂನ ಜ್ಞಾನಗಳು ತಮ್ಮ ಜ್ಞಾನಗಳಲ್ಲಿ ಸೇರಿದ್ದಾಗಿದೆ. ಸೃಷ್ಟಿಗಳಲ್ಲಿ ಶ್ರೇಷ್ಠರಾದ ಪ್ರವಾದಿಯವರೇ, ನನ್ನ ಅಸಂಖ್ಯಾತ ಸಂಕಷ್ಟಗಳಿಗೆ ರಕ್ಷಣೆಯಾಗಿ ನನಗೆ ತಮ್ಮ ಹೊರತು ಬೇರೆ ಯಾರೂ ಇಲ್ಲ".

ಶರಫಲ್ ಅನಾಂ ಮೌಲೀದ್‌ನಲ್ಲಿ ಹೇಳುವುದನ್ನು ನೋಡಿರಿ: "ಆದ್ದರಿಂದ ನನ್ನನ್ನು ರಕ್ಷಿಸಿರಿ. ನನಗೆ ಸಹಾಯ ಮಾಡಿರಿ. ನರಕಾಗ್ನಿಯಿಂದ ರಕ್ಷಿಸುವವರೇ, ಸಂದಿಗ್ಧ ಸಮಯಗಳಲ್ಲಿ ನನ್ನ ಸಹಾಯಕ ಮತ್ತು ರಕ್ಷಕರಾಗಿರುವವರೇ".

ಮಂಕೂಸ್ ಮೌಲೀದ್‌ನಲ್ಲಿ ಇದಕ್ಕಿಂತಲೂ ಕಠಿಣವಾದ ಶಿರ್ಕ್‌ನ ಪ್ರಾರ್ಥನೆಗಳಿವೆ. ಅಲ್ಲಾಹನೊಡನೆ ಮಾತ್ರ ಪ್ರಾರ್ಥಿಸಬೇಕಾದ ಮುಸ್ಲಿಮರು ಮೌಲೀದ್ ಆಚರಿಸಿ ಪ್ರವಾದಿ(ಸ)ರೊಡನೆ ಪ್ರಾರ್ಥಿಸಿ ಮುಶ್ರಿಕ್‌ಗಳಾಗುತ್ತಿರುವುದು ಬಹುದೊಡ್ಡ ದುರಾದೃಷ್ಟವಾಗಿದೆ. ಪಾಪ ಸುರಕ್ಷಿತರಾದ ಪ್ರವಾದಿ ಮುಹಮ್ಮದ್(ಸ)ರು ವಿಶ್ವ ಸಮುದಾಯದ ನಾಯಕರಾಗಿದ್ದಾರೆ. ಪರಲೋಕದಲ್ಲಿ ಸ್ತುತಿಪತಾಕೆ ಹಿಡಿದ ಪ್ರವಾದಿ(ಸ)ರ ಹಿಂದೆ ಇತರ ಪ್ರವಾದಿಗಳ ಸಹಿತ ಸರ್ವರೂ ಅಣಿಗೊಳ್ಳುವರು. ತನ್ನ ಸುನ್ನತ್‌ಗಳನ್ನು ಅನುಸರಿಸಿದ ಅನುಯಾಯಿಗಳಿಗೆ ಪರಲೋಕದ ವಿಶೇಷ ಪಾನೀಯವಾದ 'ಹೌಳುಲ್ ಕೌಸರ್'ನ್ನು ಕುಡಿಯಲು ಕೊಡುವ ಪ್ರವಾದಿ(ಸ)ರು ಅಲ್ಲಾಹನಿಂದ ಶಿಫಾರಸು ಬೇಡಲು ಅನುಮತಿ ಕೇಳುವ ಮತ್ತು ಅನುಮತಿ ಲಭಿಸುವ ಪ್ರಥಮ ವ್ಯಕ್ತಿಯಾಗಿದ್ದಾರೆ. ಪುನರುತ್ಥಾನದಂದು ಕಬರ್‌ನಿಂದ ಪ್ರಥಮವಾಗಿ ಎದ್ದೇಳುವವರೂ ಸ್ವರ್ಗದ ದ್ವಾರವನ್ನು ತಟ್ಟುವವರೂ ಪ್ರಥಮವಾಗಿ ಸ್ವರ್ಗವನ್ನು ಪ್ರವೇಶಿಸುವವರೂ ಪ್ರವಾದಿ(ಸ)ರಾಗಿದ್ದಾರೆ. ಅವರನ್ನು ಅನುಸರಿಸುವುದು ಅಲ್ಲಾಹನನ್ನು ಅನುಸರಿಸುವುದಾಗಿದೆ. ಅವರನ್ನು ಪ್ರೀತಿಸುವುದು ಅಲ್ಲಾಹನ ಪ್ರೀತಿಗೆ ಕಾರಣವೂ ಆಗಿದೆ. ಜಗತ್ತಿನಾದ್ಯಂತ ಸತ್ಯವಿಶ್ವಾಸಿಗಳು ಅವರಿಗೆ ಸ್ವಲಾತ್ ಹಾಗೂ ಸಲಾಮ್ ಹೇಳುತ್ತಾರೆ. ಮಾತ್ರವಲ್ಲ, ಅಲ್ಲಾಹನ ಅನುಗ್ರಹಗಳೂ ಮಲಕ್‌ಗಳ ಪ್ರಾರ್ಥನೆಗಳೂ ಅವರ ಮೇಲೆ ಸದಾ ವರ್ಷಿಸುತ್ತದೆ. ಪ್ರಪಂಚದೆಲ್ಲೆಡೆ ಅದಾನ್‌ಗಳಲ್ಲೂ, ಇಖಾಮತ್‌ಗಳಲ್ಲೂ ಅವರ ನಾಮ ಪ್ರಶಂಸಿಸಲಾಗುತ್ತದೆ.

ಅಲ್ಲಾಹು ಹೇಳುತ್ತಾನೆ: "ನಿಮಗಾಗಿ ನಾವು ನಿಮ್ಮ ಕೀರ್ತಿಯನ್ನು ಎತ್ತರಿಸಿದೆವು" (ಕುರ್‌ಆನ್ 94:4). ಅಲ್ಲಾಹು ಗೌರವಿಸಿದ ಪ್ರವಾದಿ(ಸ)ರನ್ನು ಅಲ್ಲಾಹು ನೀಡಿದ ಸ್ಥಾನಕ್ಕೆ ಏರಿಸಬಾರದೆಂದು ಸ್ವತಃ ಪ್ರವಾದಿ(ಸ)ರೇ ತಾಕೀತು ಮಾಡಿದ್ದಾರೆ.

ಅನಸ್(ರ)ರವರು ಹೇಳುತ್ತಾರೆ: "ಒಬ್ಬರು ಓ ಮುಹಮ್ಮದ್, ನಮ್ಮ ನೇತಾರರೇ, ನೇತಾರರ ಪುತ್ರ, ನಮ್ಮಲ್ಲಿ ಉತ್ತಮರೇ, ಉತ್ತಮರ ಪುತ್ರಾ" ಎಂದೆಲ್ಲಾ ಕರೆಯುತ್ತಾರೆ. ಆಗ ಪ್ರವಾದಿ(ಸ)ರು ಹೇಳುತ್ತಾರೆ: "ಜನರೇ, ನೀವು ಭಕ್ತಿಯುಳ್ಳವರಾಗಬೇಕೆಂದು ನಾನು ಆದೇಶಿಸುತ್ತೇನೆ. ನೀವು ಶೈತಾನನ ಇಚ್ಛೆಗಳಿಗೆ ಮಣಿಯಬೇಡಿರಿ. ನಾನು ಅಬ್ದುಲ್ಲರ ಪುತ್ರ ಮುಹಮ್ಮದ್ ಆಗಿದ್ದೇನೆ. ನಾನು ಅಲ್ಲಾಹನ ದಾಸನೂ ಸಂದೇಶವಾಹಕನೂ ಆಗಿದ್ದೇನೆ. ಅಲ್ಲಾಹನಾಣೆ ಸತ್ಯ, ಮಹೋನ್ನತನೂ ಪ್ರತಾಪಶಾಲಿಯೂ ಆದ ಅಲ್ಲಾಹು ನನಗೆ ನೀಡಿದ ಸ್ಥಾನಕ್ಕಿಂತ ಹೆಚ್ಚು ನೀವು ನನ್ನನ್ನು ಪ್ರಶಂಸಿಸುವುದನ್ನು ನಾನು ಎಂದಿಗೂ ಇಷ್ಟಪಡುವುದಿಲ್ಲ." (ಅಹ್ಮದ್)

ಇಬ್‌ನು ಅಬ್ಬಾಸ್(ರ) ಹೇಳುತ್ತಾರೆ: "ಮರ್ಯಮರ ಪುತ್ರ ಈಸಾ(ಅ)ರನ್ನು ಕ್ರೈಸ್ತರು ಹೊಗಳಿದಂತೆ ನೀವು ನನ್ನನ್ನು ಅತಿಯಾಗಿ ಹೊಗಳಬೇಡಿರಿ. ನಿಶ್ಚಯವಾಗಿಯೂ ನಾನು ಕೇವಲ ಅವನ(ಅಲ್ಲಾಹನ) ದಾಸನಾಗಿದ್ದೇನೆ. ಆದ್ದರಿಂದ ನೀವು (ನನ್ನ ಕುರಿತು) ಅಲ್ಲಾಹನ ದಾಸ ಮತ್ತು ಅವನ ಸಂದೇಶವಾಹಕನೆಂದು ಹೇಳಿರಿ" (ಬುಖಾರಿ).

ಪ್ರವಾದಿ ಪ್ರಶಂಸೆಯ ಶೈಲಿ ಮತ್ತು ಮಿತಿ ಎಷ್ಟಿರಬೇಕೆಂದು ಮೇಲಿನ ಹದೀಸ್‌ಗಳು ಸ್ಪಷ್ಟಪಡಿಸುತ್ತವೆ. ನಾಳೆಯ ವಿಷಯಗಳನ್ನು ತಿಳಿಯುವ

✍ ಇಸ್ಮಾಯೀಲ್ ಶಾಫಿ

ಪ್ರವಾದಿಯವರು ನಮ್ಮೊಂದಿಗಿದ್ದಾರೆಂದು ಹಾಡಿ ಹೊಗಳಿದ ಮಕ್ಕಳನ್ನು ಹಾಗೆ ಹಾಡದಂತೆ ತಡೆದ ಪ್ರವಾದಿ(ಸ)ರು ತನ್ನನ್ನು ಗೌರವಿಸಿ ಎದ್ದು ನಿಲ್ಲುವುದಕ್ಕೆ ಸಹ ತಡೆದಿದ್ದರು. ಆದರೆ ಪೆಟ್ರೋಲ್ ಕುಡಿದು ಬೆಂಕಿಯುಗುಳುತ್ತಾ, ಕತ್ತಿ, ದೊಣ್ಣೆಗಳನ್ನು ಬೀಸಿ ತಾಲೀಮು ಪ್ರದರ್ಶಿಸುತ್ತಾ ರಸ್ತೆ ಸಂಚಾರಕ್ಕೆ ತಡೆಯೊಡ್ಡಿ ಮೀಲಾದ್ ರ್‍ಯಾಲಿ ಮಾಡಿ, ಮೀಲಾದುನ್ನಬಿ ಜಿಂದಾಬಾದ್, ಪಿ.ಪಿ. ಮುಹಮ್ಮದ್ ಜಿಂದಾಬಾದ್, 'ಯಾನಬಿ ಸಲಾಮ್ ಅಲೈಕುಮ್...' ಎಂದೆಲ್ಲಾ ಬೊಬ್ಬಿಡುತ್ತಾ ರಸ್ತೆಗಳಲ್ಲಿ ಕುಣಿದು ಕುಪ್ಪಳಿಸುತ್ತಾ ಮಹಾನ್ ಪ್ರವಾದಿ(ಸ)ರನ್ನು ಬಹಿರಂಗವಾಗಿ ಅವಮಾನಿಸುವ ಮತ್ತು ಪ್ರವಾದಿ(ಸ)ರನ್ನು ಅಲ್ಲಾಹನ ಸ್ಥಾನಕ್ಕೇರಿಸಿ ಪಾಪಗಳನ್ನು ಕ್ಷಮಿಸಲು ಮತ್ತು ನರಕಾಗ್ನಿಯಿಂದ ರಕ್ಷಿಸಲು ಪ್ರವಾದಿ(ಸ)ರೊಂದಿಗೆ ಪ್ರಾರ್ಥಿಸುವ ಮೌಲೀದ್‌ವಾದಿಗಳು ಆಚರಿಸುವ ಈದ್ ಮೀಲಾದ್ ಎಂಬುದು ಇಸ್ಲಾಮಿನ ಪರಮ ಶತ್ರುವಾದ ಅಬೂಲಹಬನ ಸುನ್ನತ್ ಆಗಿದೆ ವಿನಾ ಪ್ರವಾದಿ(ಸ)ರಾಗಲಿ, ಸಹಾಬಿಗಳಾಗಲಿ ಆಚರಿಸಿದ ಸುನ್ನತ್ ಅಲ್ಲ.

ಇಸ್ಲಾಮ್ ಧರ್ಮವನ್ನು ಇತರ ಧರ್ಮಗಳಿಗಿಂತಲೂ ಕೀಳಾಗಿ ವಿರೂಪಗೊಳಿಸಿ ಹೊಟ್ಟೆ, ಜೇಬು ತುಂಬಿಸುತ್ತಿರುವ (8ನೇ ಪುಟಕ್ಕೆ)

# ಇಸ್ಲಾಮಿ ಸಂಘಟನೆಗಳ ದೌತ್ಯ ಮತ್ತು ಮಾರ್ಗ

(1ನೇ ಪುಟದಿಂದ)

ಅವನು (ಇಬ್ಲೀಸ್) ಹೇಳಿದನು: "ನಿನ್ನ ಪ್ರತಾಪದಾಣೆ, ನಾನು ಅವರೆಲ್ಲರನ್ನೂ ಖಂಡಿತ ದಾರಿಗೆಡಿಸಿ ಬಿಡುವೆನು. ಅವರ ಪೈಕಿ ನಿನ್ನ ನಿಷ್ಕಳಂಕರಾದ ದಾಸರ ಹೊರತು. ಅಲ್ಲಾಹು ಹೇಳಿದನು: "ಇದು ಸತ್ಯವಾಗಿದೆ. ನಾನು ಸತ್ಯವನ್ನೇ ಹೇಳುತ್ತೇನೆ. ನಿಶ್ಚಯವಾಗಿಯೂ ನಿನ್ನಿಂದ ಮತ್ತು ಅವರ (ಜನರ) ಪೈಕಿ ನಿನ್ನನ್ನು ಅನುಸರಿಸುವ ಸಕಲರಿಂದ ನಾನು ನರಕವನ್ನು ತುಂಬಿಸುವೆನು." (ಕುರ್‌ಆನ್ 38:82-85)

ಮಾನವನ ಬುದ್ಧಿಶಕ್ತಿ, ವಿಚಾರ ವೈಭವ, ವಿಶಿಷ್ಟವಾದ ಭಾವನಾ ಸಂಪನ್ನತೆ, ಯುಕ್ತಿ ಕೌಶಲ್ಯ ಮತ್ತು ಜ್ಞಾನಾರ್ಜನಾ ಸಾಮರ್ಥ್ಯ ಇತ್ಯಾದಿಗಳ ಮೂಲ ಆವಶ್ಯಕತೆಯೇನೆಂದರೆ ಧಾರ್ಮಿಕ ಚಿಂತನೆಯಲ್ಲಿ ಸ್ಥಿರವಾಗಿ ನಿಲ್ಲಿಸುವ ದೈವ ವಿಶ್ವಾಸವನ್ನು ಸುದೃಢಗೊಳಿಸುವುದಾಗಿದೆ. ಧಾರ್ಮಿಕ ಪ್ರಜ್ಞೆಯು ಮಾನವನನ್ನು ಭೂಮಿಯಲ್ಲಿ ತನ್ನ ಹೊಣೆಗಾರಿಕೆಯ ನಿರ್ವಹಣೆಗಾಗಿ ನಿರ್ಬಂಧಿಸುತ್ತದೆ. ಮಾನವನು ಕಾಲ ಹಾಗೂ ಚರಿತ್ರೆಯ ಕೇವಲ ಉತ್ಪನ್ನವಾಗಿ ಮಾರ್ಪಡುವ ಬದಲು ಕಾಲವನ್ನು ರೂಪುಗೊಳಿಸಿ ಚರಿತ್ರೆ ನಿರ್ಮಿಸುವವನನ್ನಾಗಿ ಮಾಡುತ್ತದೆ. ಮಾನವನು ತನ್ನ ಬಾಧ್ಯತೆಯನ್ನು ನಿರ್ವಹಿಸುವಾಗ ಮಾತ್ರವೇ ಮನುಷ್ಯ ಕೇಂದ್ರಿತ ಪ್ರಾಪಂಚಿಕ ದೃಷ್ಟಿಕೋನವು ಅರ್ಥವತ್ತಾಗುತ್ತದೆ. ಮಾನವನಿಗೆ ಅಲ್ಲಾಹು ನೀಡಿದ ಈ ವಿಶೇಷ ಪದವಿಯೇ 'ನಾವು ಆದಂ ಸಂತತಿಗಳನ್ನು ಗೌರವಿಸಿದ್ದೇವೆ' ಎಂದು ಕುರ್‌ಆನ್‌ನಲ್ಲಿ ವರ್ಣಿಸಲಾದ ಮಾತಿನ ಅರ್ಥ. ಈ ಪದವಿಯನ್ನು ಕುರ್‌ಆನ್ ಸಾಂಕೇತಿಕವಾಗಿ 'ಅಮಾನತ್' ಎಂದು ಹೇಳಿದೆ.

"ನಾವು ಈ ಹೊಣೆಗಾರಿಕೆಯನ್ನು ಆಕಾಶಗಳು, ಭೂಮಿ ಹಾಗೂ ಪರ್ವತಗಳ ಮೇಲೆ (ಎತ್ತಿ) ತೋರಿಸಿದೆವು. ಆದರೆ ಅವುಗಳು ಅದನ್ನು ವಹಿಸಿಕೊಳ್ಳಲು ನಿರಾಕರಿಸಿದವು ಮತ್ತು ಅದರ ಕುರಿತು ಭಯಪಟ್ಟವು. ಆದರೆ ಮಾನವನು ಅದನ್ನು ವಹಿಸಿಕೊಂಡನು. (ಆದರೂ ಮಾನವರಲ್ಲಿ ಹೆಚ್ಚಿನವರು ವಿವೇಚನಾ ಶಕ್ತಿಯಿದ್ದೂ ಆ ಹೊಣೆಗಾರಿಕೆಯನ್ನು ನಿರ್ವಹಿಸುವಲ್ಲಿ ವಿಫಲರಾಗಿದ್ದಾರೆ) ನಿಶ್ಚಯವಾಗಿಯೂ ಅವನು ಅಕ್ರಮಿಯೂ ತಿಳಿಗೇಡಿಯೂ ಆಗಿದ್ದಾನೆ." (ಕುರ್‌ಆನ್ 33:72)

ಮಾನವನು ಈ 'ಅಮಾನತ್ತನ್ನು' ಒಂದಿಷ್ಟೂ ಭಂಗವಾಗದ ರೀತಿಯಲ್ಲಿ ಸಮರ್ಪಕವಾಗಿ ನಿರ್ವಹಿಸುವ ವರೆಗೆ ಅವನು ಭೂಮಿಯ 'ಖಲೀಫ' ಎಂಬ ಪದವಿಗೆ ಅರ್ಹನಾಗುತ್ತಾನೆ. "ನಾನು ಭೂಮಿಯಲ್ಲಿ ಒಬ್ಬ ಖಲೀಫರನ್ನು ನಿಯಮಿಸಲಿದ್ದೇನೆ ಎಂದು ನಿಮ್ಮ ಪ್ರಭು ಮಲಕ್‌ಗಳೊಡನೆ ಹೇಳಿದ ಸಂದರ್ಭ(ವನ್ನು ಸ್ಮರಿಸಿರಿ). ಅವರು ಹೇಳಿದರು: "ನೀನು ಅದರಲ್ಲಿ (ಭೂಮಿಯಲ್ಲಿ) ವಿನಾಶವನ್ನುಂಟು ಮಾಡುವವರನ್ನು ಮತ್ತು ರಕ್ತ ಹರಿಸುವವರನ್ನು ನಿಯಮಿಸುವೆಯಾ? ನಾವು ನಿನ್ನನ್ನು ಸ್ತುತಿಸುತ್ತ, ನಿನ್ನ ಗುಣಗಾನ ಮಾಡುತ್ತ, ನಿನ್ನ ಪರಿಶುದ್ಧತೆಯನ್ನು ಕೊಂಡಾಡುತ್ತಿದ್ದೇವಲ್ಲಾ. (ಅದಕ್ಕೆ) ಅವನು (ಅಲ್ಲಾಹು) ನಿಶ್ಚಯವಾಗಿಯೂ ನಿಮಗೆ ತಿಳಿದಿರದಂತಹದು ನನಗೆ ತಿಳಿದಿದೆ ಎಂದನು. (ಕುರ್‌ಆನ್ 2:30)

ವ್ಯಕ್ತಿಜೀವನ ಹಾಗೂ ಸಾಮಾಜಿಕ ಜೀವನಗಳಲ್ಲಿ ಈ ಖಿಲಾಫತ್‌ನ ಅರ್ಥ ನೆರವೇರಲ್ಪಡುವುದು ಜನರಲ್ಲಿ ದೇವಪ್ರಜ್ಞೆಯನ್ನು ಪ್ರಚುರಪಡಿಸುವ, ಸತ್ಕರ್ಮ ಹಾಗೂ ಸದಾಚಾರಗಳನ್ನು ಅನುಷ್ಠಿಸುವ ಮತ್ತು ದೇವ ಸಮರ್ಪಿತವಾದ ಜೀವನವನ್ನು ನಡೆಸುವ ಮೂಲಕವಾಗಿರಬೇಕೆಂದು ವಿಶುದ್ಧ ಕುರ್‌ಆನ್ ಸ್ಪಷ್ಟಪಡಿಸುತ್ತದೆ. "ಅಲ್ಲಾಹನೆಡೆಗೆ ಆಹ್ವಾನಿಸಿದ, ಸತ್ಕರ್ಮವೆಸಗಿದ ಮತ್ತು ನಾನು ಮುಸ್ಲಿಮರಲ್ಲಿ ಸೇರಿದವನಾಗಿದ್ದೇನೆ ಎಂದು ಹೇಳುವವನಿಗಿಂತಲೂ ಉತ್ತಮವಾದ ಮಾತನ್ನು ಹೇಳುವವನು ಯಾರಿದ್ದಾನೆ?" (ಕುರ್‌ಆನ್ 41:33)

ವೈಯಕ್ತಿಕ ಮತ್ತು ಸಾಮೂಹಿಕ ಮಟ್ಟಗಳಲ್ಲಿ ಮಾನವರಾಶಿ ವಹಿಸಿಕೊಂಡಿರುವ ಖಿಲಾಫತ್ ಹಾಗೂ ಅಮಾನತ್‌ಗಳ ಫಲಪ್ರದವಾದ ನಿರ್ವಹಣೆ ಮತ್ತು ಪ್ರಾಯೋಗಿಕತೆಗಳನ್ನು ಸಾಧ್ಯವಾಗಿಸುವುದು ಸಂಘಟನೆಯಾಗಿದೆ. ಸಂಘಟನೆಯ (ಅಲ್ ಜಮಾಅತ್) ಅನುಪಸ್ಥಿತಿಯಲ್ಲಿ ಅದು ಯಥಾವತ್ತಾಗಿ ಜಾರಿಗೊಳ್ಳುವುದಿಲ್ಲ. ಸಂಘಟನೆ (ಅಲ್‌ಜಮಾಅ) ಇಲ್ಲದಿದ್ದರೆ ದೀನ್ ನೆಲೆ ನಿಲ್ಲದು ಎಂದು ಉಮರ್(ರ)ರವರು ಹೇಳಿದ್ದು ವಾಸ್ತವವಾಗಿದೆ. ಇಸ್ಲಾಮಿ ಸಂಘಟನೆಗಳಿಗೆ ಅತ್ಯಂತ ಉತ್ಕೃಷ್ಟ ಮಾದರಿ ಪ್ರವಾದಿ(ಸ)ರು ಮತ್ತು ಸಹಾಬಿಗಳ ಸಂಘವಾಗಿದೆ. ಅವರ ಬಳಿಕ ಹೊಣೆಗಾರಿಕೆಯನ್ನು ಖುಲಫಾವುರ್ರಾಶಿದ್‌ಗಳ ನೇತೃತ್ವದ ಜಮಾಅತ್ ನಿರ್ವಹಿಸಿತು. ಆದರೆ ಅಲಿ(ರ)ರ ಕಾಲಾನಂತರ ಅಖಂಡವೂ ಪವಿತ್ರವೂ (8ನೇ ಪುಟಕ್ಕೆ)

✍ ಶೌಕತ್ ಅಲಿ ಪಮಾಮ್

## ಕುರ್‌ಆನಿನ ಚಿಂತನೆಗಳು – 18

✍ ಅಶ್ರಫಲಿ, ನಡುಪದವು

# ಪ್ರಾಣಿಗಳ ಪಟ್ಟಿಯಲ್ಲಿ "ಬುದ್ಧಿ" ಜೀವಿಗಳು

أَمْ تَحْسَبُ أَنَّ أَكْثَرَهُمْ يَسْمَعُونَ أَوْ يَعْقِلُونَ إِنْ هُمْ إِلَّا كَالْأَنْعَامِ بَلْ هُمْ أَضَلُّ سَبِيلًا

ಅಥವಾ ಅವರಲ್ಲಿ ಹೆಚ್ಚಿನವರು ಆಲಿಸುತ್ತಿದ್ದಾರೆಂದೂ ಗ್ರಹಿಸುತ್ತಿದ್ದಾರೆಂದೂ ನೀವು ಭಾವಿಸುತ್ತೀರಾ? ಅವರು ಪ್ರಾಣಿಗಳಂತೆ ವಿನಾ (ಇನ್ನೇನೂ) ಅಲ್ಲ. ಅಷ್ಟೇ ಅಲ್ಲ, ಅವರು ಅವುಗಳಿಗಿಂತಲೂ ಹೆಚ್ಚು ದಾರಿಗೆಟ್ಟವರು."

(ಕುರ್‌ಆನ್ 25:44)"

ಚಿಂತನಾ ಲೋಕದ ಬಹುದೊಡ್ಡ ಯಥಾರ್ಥವೊಂದು ಮೇಲಿನ ಸೂಕ್ತದಲ್ಲೊಳಗೊಂಡಿದೆ. ವರ್ತಮಾನ ಕಾಲವನ್ನು ಚಿಂತನಾ ವಿಪ್ಲವದ ಯುಗವೆಂದು ಬಣ್ಣಿಸಬಹುದಾಗಿದೆ. ಪೌರಾಣಿಕ ಮಾನವರಿಗೆ ತಲುಪಲಾಗದಿದ್ದಂತಹ ಎತ್ತರಕ್ಕೂ, ಆಳಕ್ಕೂ ಆಧುನಿಕ ಮನುಷ್ಯನ ಚಿಂತನೆ ಅಧ್ಯಯನ ಹಾಗೂ ಸಂಶೋಧನೆಗಳು ತಲುಪಿವೆ. ಆದರೆ ಹೆಚ್ಚಿನವರು ಅನಿವಾರ್ಯವಾಗಿ ಚಿಂತಿಸಬೇಕಾಗಿದ್ದ ವಿಷಯದತ್ತ ತಲುಪದಿರುವುದು ಬಹುದೊಡ್ಡ ದುರಂತವೆನ್ನಬೇಕು. ಇದು ಎಲ್ಲಾ ಕಾಲಗಳ ಅನುಭವವಾಗಿದೆ.

ತಮ್ಮನ್ನು ಸೃಷ್ಟಿಸಿ ಅದ್ಭುತಕರವಾದ ಬುದ್ಧಿ ಶಕ್ತಿ ಮತ್ತು ಶರೀರ ರಚನೆಯನ್ನು ವ್ಯವಸ್ಥೆಗೊಳಿಸಿದವನ ಕುರಿತು ಅಂದರೆ ಸೃಷ್ಟಿಕರ್ತನಾದ ಅಲ್ಲಾಹನ ಕುರಿತು ಬಹುತೇಕ ಮಂದಿ ಸರಿಯಾದ ರೀತಿಯಲ್ಲಿ ಚಿಂತಿಸಲಿಲ್ಲ. ಇದು ಸಂದೇಶ ಪ್ರಚಾರಕರನ್ನು ಮಾನಸಿಕವಾಗಿ ನೋಯಿಸುವ ವಿಷಯವಾಗಿದೆ. ಸತ್ಯೋಪದೇಶಕರಿಗೆ ಎಷ್ಟೇ ಹಿತಾಕಾಂಕ್ಷೆಯಿದ್ದರೂ ಎಷ್ಟೇ ಕಷ್ಟಪಟ್ಟು ಶ್ರಮಿಸಿದರೂ ಜನರಲ್ಲಿ ಬಹುಪಾಲು ಮಂದಿ ದೈವಿಕ ಮಾರ್ಗದಿಂದ ದೂರ ಸರಿದು ಜೀವಿಸುತ್ತಿರುವುದನ್ನು ಕಾಣ ಬಹುದಾಗಿದೆ. ಅದರಲ್ಲಿ ವ್ಯಥೆಪಟ್ಟು ಫಲವಿಲ್ಲ. ಅವರು ಪೂರ್ಣವಾಗಿ ನಿನ್ನನ್ನು ಅನುಸರಿಸುವರೆಂದು ನಿರೀಕ್ಷಿಸಬೇಡ. ಏಕೆಂದರೆ ಅವರು ಪ್ರಾಣಿಗಳಿಗಿಂತಲೂ ಕೀಳ ಹಂತದಲ್ಲಿದ್ದಾರೆ ಎಂದು ಪ್ರವಾದಿ(ಸ)ರನ್ನು ಅಲ್ಲಾಹು ಸಮಾಧಾನಿಸುತ್ತಾನೆ.

ವೇದಿಕೆಗಳಲ್ಲೂ, ಮಾಧ್ಯಮಗಳಲ್ಲೂ ಶೋಭಿಸುವ ಅದೆಷ್ಟೋ 'ಬುದ್ಧಿಜೀವಿಗಳು' ಪ್ರಾಣಿಗಳ ಪಟ್ಟಿಯಲ್ಲಿದ್ದಾರೆ. ನಾವು ಪ್ರತಿಯೊಬ್ಬರೂ ಯಾವ ಪಟ್ಟಿಯಲ್ಲಿದ್ದೇವೆಂದು ಚಿಂತಿಸಬೇಕಾಗಿದೆ. ಬುದ್ಧಿವಂತರೆಂದು ಹೇಳಿಕೊಳ್ಳುವ ನಾವು ನಮ್ಮನ್ನು ಪೋಷಿಸುತ್ತಿರುವ ಮಹಾಮಹಿಮನಾದ ಅಲ್ಲಾಹನ ಕುರಿತು ಒಂದಿಷ್ಟು ಚಿಂತಿಸದೆ, ಅವನ ಪವಿತ್ರ ಗ್ರಂಥವಾದ ಕುರ್‌ಆನಿನ ಮಾರ್ಗದರ್ಶನದಂತೆ ಜೀವಿಸದೆ, ಕಲ್ಲು, ಮರ, ಲೋಹಗಳ ವಿಗ್ರಹಗಳನ್ನೂ ಸಂತರ ಸಮಾಧಿಗಳನ್ನೂ ಪೂಜಿಸುತ್ತ ದೇವಧಿಕ್ಕಾರಿಗಳಾಗಿ ಜೀವಿಸುತ್ತಿರುವವರು ಪ್ರಾಣಿಗಳಿಗಿಂತಲೂ ಕೀಳಲ್ಲವೆ ಇನ್ನೇನು? ಅಲ್ಲಾಹನ ಕುರಿತು ಚಿಂತಿಸುವ ಮತ್ತು ಸತ್ಕರ್ಮವೆಸಗುವ ಸತ್ಯವಿಶ್ವಾಸಿಗಳು ಮಾತ್ರವೇ ಸಜ್ಜನರ ಪಟ್ಟಿಯಲ್ಲಿ ಸೇರ್ಪಡೆಗೊಳ್ಳುತ್ತಾರೆ. •

# ಇಸ್ಲಾಮಿ ಸಂಘಟನೆಗಳ ದೌತ್ಯ ಮತ್ತು ಮಾರ್ಗ

(7ನೇ ಪುಟದಿಂದ)

ಆಗಿದ್ದ ಇಸ್ಲಾಮಿ ಜಮಾಅತ್‌ನಲ್ಲಿ ಒಡಕುಂಟಾಯಿತು. ಆ ನಂತರದ ಕಾಲಘಟ್ಟಗಳಲ್ಲಿ ಹಲವಾರು ಜಮಾಅತುಗಳು, ವೈಚಾರಿಕ ವಿಭಿನ್ನತೆಗಳು ರೂಪುಗೊಂಡವು.

ಇಂತಹ ವಿಭಿನ್ನಾಭಿಪ್ರಾಯಗಳು ಆಕಸ್ಮಿಕವಲ್ಲ. ಪ್ರವಾದಿ(ಸ)ರು ಜೀವಿಸಿರುವಾಗಲೇ ಹಲವು ವಿಷಯಗಳಲ್ಲಿ ಅನುಚರರ ಮಧ್ಯೆ ಅಭಿಪ್ರಾಯ ಭೇದಗಳುಂಟಾಗಿದ್ದವು. ಆದರೆ ದೈವಿಕ ಸಂದೇಶಗಳು ಲಭಿಸುತ್ತಿದ್ದ ಪ್ರವಾದಿಯವರು ಅವರ ಮಧ್ಯೆ ಅಂತಿಮ ತೀರ್ಪು ನೀಡುತ್ತಿದ್ದುದರಿಂದ ಅವರು ಭಿನ್ನತೆಗಳಿಂದ ರಕ್ಷಿಸಲ್ಪಡುತ್ತಿದ್ದರು. ಆದರೆ ಮುಂದಿನ ದಿನಗಳಲ್ಲಿ ಮುಸ್ಲಿಮ್ ಸಮೂಹ ಬೇರೆ ಬೇರೆ ಸಂಘಗಳಾಗಿ ಭಿನ್ನಿಸುವ ಸಾಧ್ಯತೆಯಿದೆಯೆಂದು ಪ್ರವಾದಿ(ಸ)ರು ಹಲವು ಬಾರಿ ತಾಕೀದು ಮಾಡಿದ್ದರು.

"ನಿಮಗಿಂತ ಮುಂಚಿನ ಗ್ರಂಥದವರು 72 ವಿಭಾಗಗಳಾಗಿ ಬೇರ್ಪಟ್ಟಿದ್ದರು. ಆದರೆ ನನ್ನ ಸಮುದಾಯ 73 ವಿಭಾಗಗಳಾಗಿ ಬೇರ್ಪಡಲಿದ್ದಾರೆ. ಆ ಪೈಕಿ 72 ವಿಭಾಗಗಳು ನರಕದಲ್ಲಾಗುವರು, ಒಂದು ವಿಭಾಗ ಮಾತ್ರ ಸ್ವರ್ಗದಲ್ಲಿ". (ಅಬೂದಾವೂದ್, ತಿರ್ಮುದಿ, ಇಬ್‌ನುಮಾಜ, ಅಹ್ಮದ್) ಜೂದ-ಕ್ರೈಸ್ತರು 72 ವಿಭಾಗಗಳಾಗಿ ಬೇರ್ಪಡುವರು, ನನ್ನ ಸಮುದಾಯ 73 ವಿಭಾಗಗಳಾಗಿ ಬೇರ್ಪಡುವರು" ಎಂದು ಹೇಳಿದ ಬೇರೆ ಹದೀಸ್ ಕೂಡಾ ಇದೆ. 73 ಎಂಬ ಸ್ಪಷ್ಟ ಲೆಕ್ಕಕ್ಕಿಂತಲೂ ಮೇಲಾಗಿ ಬಹಳಷ್ಟು ವಿಭಾಗಗಳು ಉಂಟಾಗಲಿವೆಯೆಂಬ ಸೂಚನೆ ಈ ಹದೀಸಿನಲ್ಲಿದೆಯೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಪ್ರವಾದಿ(ಸ)ರ ಕಾಲಾನಂತರ ಇಸ್ಲಾಮಿ ಸಮುದಾಯದಲ್ಲಿ ಹುಟ್ಟಿಕೊಳ್ಳುತ್ತಿರುವ ಸಂಘಟನೆಗಳಲ್ಲಿ ನೈಜ ಇಸ್ಲಾಮಿ ಸಂಘಟನೆ ಯಾವುದು ಎಂದು ಕಂಡು ಹಿಡಿಯಲು ಪ್ರವಾದಿ(ಸ)ರೇ ನಿಶ್ಚಯಿಸಿದ ಮಾನದಂಡವಿದೆ. 73 ವಿಭಾಗಗಳ ಕುರಿತು ಪ್ರವಾದಿ(ಸ)ರು ತಾಕೀದು ನೀಡಿದಾಗ ಸಹಾಬಿಗಳು ಕೇಳಿದರು: "ಸ್ವರ್ಗಾರ್ಹರಾದ ಆ ವಿಭಾಗ ಯಾವುದು ರಸೂಲರೇ" ಎಂದು. ಅದಕ್ಕೆ ಅವರು "ನಾನು ಮತ್ತು ನನ್ನ ಸಹಾಬಿಗಳು ನೆಲೆಗೊಂಡಿರುವ ಮಾರ್ಗವನ್ನು ಅವಲಂಬಿಸುವವರು" ಎಂದುತ್ತರಿಸಿದರು. ಮತ್ತೊಮ್ಮೆ ರಸೂಲ್(ಸ)ರು ಹೀಗೆ ಹೇಳುತ್ತಾರೆ: "ನನ್ನ ಕಾಲಾನಂತರ ನಿಮ್ಮಲ್ಲಿ ಯಾರಾದರೂ ಜೀವಿಸಿರುವುದಾದರೆ ಆತ ಬಹಳಷ್ಟು ಭಿನ್ನತೆಗಳನ್ನು ಕಾಣಬೇಕಾದೀತು. ಆಗ ರಕ್ಷಣೆಗಾಗಿ ನೀವು ನನ್ನ ಸುನ್ನತ್ ಮತ್ತು ನನ್ನ ಅನುಚರರ ಜೀವನ ಶೈಲಿಯನ್ನು ಬಿಗಿಯಾಗಿ ಹಿಡಿದುಕೊಳ್ಳಿರಿ. ನೀವು ಅದನ್ನು ದವಡೆ ಹಲ್ಲುಗಳಿಂದ ಕಚ್ಚಿ ಹಿಡಿಯಿರಿ. ನೂತನವಾದಗಳ ಬಗ್ಗೆ ನೀವು ಜಾಗರೂಕರಾಗಿರಿ. ಎಲ್ಲಾ ನೂತನ ವಾದಗಳು ಬಿದ್‌ಅತ್(ಪಥಭ್ರಷ್ಟತೆ)ಗಳಾಗಿವೆ". (ಅಬೂದಾವೂದ್, ತಿರ್ಮುದಿ, ಇಬ್‌ನುಮಾಜ)

ಇಸ್ಲಾಮಿ ಸಂಘಟನೆಯ ಮೂಲ ಪ್ರಮಾಣ ಕುರ್‌ಆನ್ ಮತ್ತು ಸುನ್ನತ್‌ಗಳಾಗಿವೆ. ಈ ಎರಡು ಪ್ರಮಾಣಗಳನ್ನು ತಳಹದಿಯಾಗಿ ಸ್ವೀಕರಿಸಿರುವ ಸಂಘಟನೆಗಳು ಮಾತ್ರವೇ 'ಅಹ್ಲು ಸುನ್ನತಿವಲ್ ಜಮಾಅ' ಎಂಬ ಪದವಿಗೆ ಅರ್ಹವಾಗುತ್ತವೆ. ಈ ಪ್ರಮಾಣಗಳನ್ನು ಬಿಟ್ಟು ಆ ಇಮಾಮ್ ಹಾಗೆ ಹೇಳಿದ್ದಾರೆ, ಈ ಖೋಜ ಹೀಗೆ ಮಾಡಿದ್ದಾರೆ, ಸೌದಿ ಪಂಡಿತರು ಹಾಗೆ ಹೇಳಿದ್ದಾರೆ, ಇರಾಕಿನ ಒಂದು ಗುಂಪು ಪಂಡಿತರು ಹೀಗೆ ಹೇಳಿದ್ದಾರೆ ಎಂಬಂತಹ ಪಂಡಿತಾಭಿಪ್ರಾಯಗಳನ್ನು ಪ್ರಮಾಣವಾಗಿ ಸ್ವೀಕರಿಸಿ ಸಂದಿಗ್ಧ ಸ್ಥಿತಿಗಳಲ್ಲಿ ಜಿನ್ನ್‌ಗಳೊಂದಿಗೆ ಸಹಾಯ ಬೇಡಬಹುದು, ವಿಗ್ರಹ ಪೂಜೆ ಮಾಡಬಹುದೆಂದು ವಾದಿಸುವರು ಪಥಭ್ರಷ್ಟ ಪಂಗಡಗಳ ಸದಸ್ಯರಲ್ಲದೆ ಇನ್ನಾರು? ನೈಜ ಇಸ್ಲಾಮಿ ಸಂಘಟನೆ ಯಾವುದೇ ವಿಷಯದಲ್ಲಿ ಅಂತಿಮ ತೀರ್ಮಾನಕ್ಕಾಗಿ ಮೂಲ ಪ್ರಮಾಣಗಳನ್ನೇ ಆಶ್ರಯಿಸುತ್ತದೆ. ಅಲ್ಲಾಹು ಹೇಳುವುದನ್ನು ನೋಡಿರಿ:

"ಯಾವುದಾದರೂ ವಿಷಯದಲ್ಲಿ ನೀವು ಪರಸ್ಪರ ಭಿನ್ನಾಭಿಪ್ರಾಯದಲ್ಲಾದರೆ ಅದನ್ನು ನೀವು ಅಲ್ಲಾಹನೆಡೆಗೂ ಸಂದೇಶವಾಹಕರೆಡೆಗೂ ಮರಳಿಸಿರಿ." (ಕುರ್‌ಆನ್ 4:59)

"ಅಲ್ಲಾಹು ಮತ್ತು ಅವನ ಸಂದೇಶವಾಹಕರು ಒಂದು ವಿಷಯವನ್ನು ತೀರ್ಮಾನಿಸಿದರೆ ಸತ್ಯವಿಶ್ವಾಸಿಗಳಾದ ಯಾವ ಸ್ತ್ರೀ-ಪುರುಷರಿಗೂ ತಮ್ಮ ವಿಷಯದ ಬಗ್ಗೆ (ಇನ್ನೊಂದು) ಆಯ್ಕೆ(ಅಥವಾ ಅಭಿಪ್ರಾಯ) ಇರಕೂಡದು." (ಕುರ್‌ಆನ್ 33:36)

ಗತಕಾಲ ವಿದ್ವಾಂಸರನ್ನಾಗಲಿ, ಅವರ ಗ್ರಂಥಗಳನ್ನಾಗಲಿ, ಇಮಾಮರನ್ನಾಗಲಿ, ವಿವಿಧ ಮದ್‌ಹಬ್‌ಗಳನ್ನಾಗಲಿ ಅಂಧಾನುಕರಣೆ ಮಾಡುವುದು ಅಹ್ಲುಸುನ್ನದ ರೀತಿಯಲ್ಲ. ಧಾರ್ಮಿಕ ವಿಷಯದಲ್ಲಿ ಮೂಲ ಪ್ರಮಾಣ ಗಳೊಂದಿಗೆ ಸರಿ ಹೊಂದುವಂತಹ ಅಭಿ ಪ್ರಾಯಗಳನ್ನು ಸ್ವೀಕರಿಸುವುದು ಮತ್ತು ಪ್ರಮಾಣಗಳಿಗೆ ವ್ಯತಿರಿಕ್ತವಾದ ಎಷ್ಟೇ ದೊಡ್ಡ ವಿದ್ವಾಂಸನ ಅಭಿಪ್ರಾಯಗಳನ್ನು ತಿರಸ್ಕರಿಸುವುದು ಇಸ್ಲಾಮಿ ಸಂಘಟನೆಗಳ ನಿಲುವಾಗಿರಬೇಕು. ಪ್ರಮಾಣಗಳ ಆಧಾರವಿಲ್ಲದ ಮುಂಗಾಮಿಗಳ ಅಭಿಪ್ರಾಯಗಳನ್ನು ತಿರಸ್ಕರಿಸಬೇಕೆಂದು ಕುರ್‌ಆನ್ ಸ್ಪಷ್ಟ ಪಡಿಸಿದೆ.

"ನಿಮಗೆ ಅರಿವಿಲ್ಲದುದನ್ನು ನೀವು ಹಿಂಬಾಲಿಸಬೇಡಿರಿ. ಶ್ರವಣ, ದೃಷ್ಟಿ ಹಾಗೂ ಹೃದಯ ಇವೆಲ್ಲದರ ಕುರಿತು ಖಂಡಿತ ವಿಚಾರಣೆ ನಡೆಸಲಾಗುವುದು" (ಕುರ್‌ಆನ್ 17:36).

"ಅಲ್ಲಾಹು ಅವತೀರ್ಣಗೊಳಿಸಿದುದನ್ನು ಅನುಸರಿಸಿರಿ ಎಂದು ಅವರೊಡನೆ ಹೇಳಲ್ಪಟ್ಟರೆ ಅವರು (ಇಲ್ಲ) ನಾವು ನಮ್ಮ ಪೂರ್ವಿಕರನ್ನು ಯಾವ ರೀತಿಯಲ್ಲಿ ಕಂಡಿದ್ದೇವೋ ಅದನ್ನೇ ನಾವು ಅನುಸರಿಸುತ್ತೇವೆ" ಎಂದು ಹೇಳುವರು. ಅವರ ಪೂರ್ವಿಕರು ಏನನ್ನೂ ಚಿಂತಿಸದವರು ಮತ್ತು ಸನ್ಮಾರ್ಗ ಹೊಂದದವರಾಗಿದ್ದರೂ (ಅವರನ್ನು ಅನುಸರಿಸುವುದೇ)" (ಕುರ್‌ಆನ್ 2:170)

ಕರ್ಮಶಾಸ್ತ್ರ ವಿಷಯಗಳಲ್ಲಿ ಸುನ್ನತ್‌ಗೆ ವಿರುದ್ಧವಾದ ಹಾದಿಯತ್ತ ಚಲಿಸುವ ಬಗ್ಗೆ ಜಾಗ್ರತೆ ವಹಿಸುವುದು ಮತ್ತು ಬಿದ್‌ಅತ್‌ಗಳ ಬಗ್ಗೆ ತಿಳಿಸಿ ಕೊಡುವುದು ಕೂಡಾ ಇಸ್ಲಾಮಿ ಸಂಘಟನೆಗಳ ಬಾಧ್ಯತೆಯಾಗಿದೆ. ವಿಶ್ವಾಸ ಕಾರ್ಯಗಳ ಹಾಗೆಯೇ ಆಚಾರ-ಅನುಷ್ಠಾನ ಕಾರ್ಯಗಳಲ್ಲೂ ಇಸ್ಲಾಮಿನ ಮೂಲ ಪ್ರಮಾಣಗಳನ್ನು ಸ್ವೀಕರಿಸುವ ಅಗತ್ಯವಿದೆಯೆಂಬ ಸಾರ್ವತ್ರಿಕ ಉಪದೇಶಗಳ ಮೂಲಕ ಜನರನ್ನು ಎಚ್ಚರಿಸುವುದು ಸಹ ಇಸ್ಲಾಮಿ ಸಂಘಟನೆಗಳ ಹೊಣೆಗಾರಿಕೆಯಲ್ಲಿ ಸೇರಿದ ಅತಿ ಮುಖ್ಯ ವಿಷಯವಾಗಿದೆ. ಹೀಗೆ ಸೃಷ್ಟಿಕರ್ತನೂ ಸಂರಕ್ಷಕನೂ ಆದ ಅಲ್ಲಾಹನನ್ನು (9ನೇ ಪುಟಕ್ಕೆ)

# ...ಮೀಲಾದ್ ಫೆಸ್ಟ್‌ಗಳು!

(7ನೇ ಪುಟದಿಂದ)

ಮುಲ್ಲಾ, ಮುಸ್ಲಿಯಾರ್‌ಗಳು ಕಲಿಸಿದ ಬುರ್ದಾಬೈತ್ ಮಾಲೆ, ಮೌಲೀದ್‌ಗಳು ಜನರನ್ನು ಇಸ್ಲಾಮಿನಿಂದ ಹೊರಹಾಕಿ ಶೈತಾನನ ಅನುಯಾಯಿಗಳಾಗಿ ಮಾರ್ಪಡಿಸಿ ನರಕಾಗ್ನಿಗೆಸೆಯುವ ನೀಚ ಕೃತ್ಯಗಳಾಗಿವೆ. ಪಾಪಗಳನ್ನು ಕ್ಷಮಿಸುವವರೂ ರಕ್ಷಕರೂ ಸಹಾಯಕರೂ ಪ್ರವಾದಿ(ಸ)ರೆಂದು ಹಾಡುವ ಮೌಲೀದ್‌ನ ಅನುಯಾಯಿಗಳೇ, ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹು ಹೇಳುವುದನ್ನು ನೋಡಿರಿ:

"(ಪ್ರವಾದಿಯವರೇ) ಹೇಳಿರಿ: ಸಂದೇಶವಾಹಕರ ಪೈಕಿ ನಾನೊಬ್ಬ ಹೊಸಬನೇನೂ ಅಲ್ಲ. (ನಾಳೆ) ನನಗಾಗಲಿ, ನಿಮಗಾಗಲಿ ಏನಾಗಲಿದೆಯೆಂದು ನನಗರಿಯದು. ನನಗೆ ನೀಡಲಾಗುತ್ತಿರುವ ವಹ್ಯ್(ದಿವ್ಯ ಸಂದೇಶ)ನ ಹೊರತು (ಬೇರೇನನ್ನೂ) ಅಲ್ಲ" (46:9). ಪಾಪಗಳನ್ನು ಕ್ಷಮಿಸಲು ಮತ್ತು ನರಕದಿಂದ ರಕ್ಷಿಸಲು ಅಲ್ಲಾಹನಿಗೆ ಮಾತ್ರವೇ ಸಾಧ್ಯ. ಚಿಕ್ಕಪ್ಪ ಅಬೂತಾಲಿಬರ ವಿಷಯದಲ್ಲಿ ಅಸಹಾಯಕರಾದ ಪ್ರವಾದಿ(ಸ)ರು ತನ್ನ ಕರುಳಿನ ಕುಡಿಯಾದ ಪುತ್ರಿಯೊಡನೆ "ಫಾತಿಮಾ, ನನ್ನ ಸಂಪತ್ತಿನಲ್ಲಿ ನಿನಗೆ ಬೇಕಾದುದನ್ನು ಕೇಳು, ಆದರೆ ನಿನ್ನನ್ನು ನರಕದಿಂದ ರಕ್ಷಿಸಲು ನನ್ನಿಂದಾಗದು, ನಿನ್ನನ್ನು ನೀನೇ ನರಕದಿಂದ ರಕ್ಷಿಸಿಕೊಳ್ಳಬೇಕು" ಎಂದು ಉಪದೇಶಿಸಿದ್ದು ಮಾಲೆ, ಮೌಲೀದ್, ಬುರ್ದಾಗಳನ್ನು ಚರಂಡಿಗೆಸೆಯಲು ನಮಗೆ ಪ್ರೇರಣೆಯಾಗಬೇಕು.

"ತಾವೇನಾದರೂ ಕೆಟ್ಟ ಕಾರ್ಯಗಳನ್ನು ಮಾಡಿದರೆ ಅಥವಾ ತಮ್ಮ ಮೇಲೆ ತಾವೇ ಅಕ್ರಮವೆಸಗಿದರೆ ಅವರು ಅಲ್ಲಾಹನನ್ನು ಸ್ಮರಿಸುತ್ತಾರೆ ಮತ್ತು ತಮ್ಮ ಪಾಪಗಳಿಗಾಗಿ ಕ್ಷಮೆ ಯಾಚಿಸುತ್ತಾರೆ. (ಅಂತಹವರಿಗಾಗಿಯೇ ಸ್ವರ್ಗವನ್ನು ಸಿದ್ಧಗೊಳಿಸಿಡಲಾಗಿದೆ) ಅಲ್ಲಾಹನ ಹೊರತು ಪಾಪಗಳನ್ನು ಕ್ಷಮಿಸುವವರು ಯಾರಿದ್ದಾರೆ" (ಕುರ್‌ಆನ್ 3:135).

# ದೇಹವನ್ನು ಅರಿತರೆ ದೇವನನ್ನು ಅರಿಯಬಹುದು

(3ನೇ ಪುಟದಿಂದ)

ಅಲ್ಲಾಹ್ ಮರಳಿಸುತ್ತಾನೆ. ಇಲ್ಲಿದ್ದಾಗ ಒಬ್ಬನ ಹೆಬ್ಬೆಟ್ಟು ಹೇಗಿತ್ತೋ, ಪರಲೋಕದಲ್ಲೂ ಹಾಗೇ ಇರುತ್ತದೆ ಎಂದರ್ಥ. ಇಲ್ಲಿ ನಕಲಿ ಹೆಬ್ಬೆಟ್ಟು ಹಾಕಿ ವಂಚನೆ ನಡೆಸಿದರೆ ಅಲ್ಲಿ ವಿಚಾರಣೆಯ ವೇಳೆ ಅಸಲಿ ಹೆಬ್ಬೆಟ್ಟು ಹಾಕಿಸಿ ವಂಚನೆಯನ್ನು ರುಜುವಾತು ಪಡಿಸುವ ವ್ಯವಸ್ಥೆ ಕೂಡಾ ಇದೆಯೆಂದು ನಾವು ಅರ್ಥಮಾಡಿಕೊಳ್ಳಬೇಕಾಗಿದೆ.

ಅಲ್ಲಾಹನ ಅಸ್ತಿತ್ವ, ಅನೂಹ್ಯವಾದ ಸೃಷ್ಟಿ ವೈಭವ, ಅಪ್ರತಿಮ ತಜ್ಞತೆ, ಅದ್ಭುತ ಸಾಮರ್ಥ್ಯಗಳ ಬಗ್ಗೆ ತಿಳಿಯಲು ಬೇರೇನೂ ಬೇಡ. ತನ್ನ ದೇಹ ರಚನೆ, ಅದರ ಚಾಲನೆ, ಕ್ರಿಯಾಶೀಲತೆ ಹಾಗೂ ಅದಕ್ಕೆ ಇರುವ ವ್ಯವಸ್ಥೆಗಳ ಬಗ್ಗೆ ಯೋಚಿಸಿದರೆ ಸಾಕು. ನಾಲ್ಕು ತಾಸಿನ ಡಯಾಲಿಸೀಸ್‌ಗೆ ಸಾವಿರ ಗಟ್ಟಲೆ ರೂಪಾಯಿಗಳ ಆಸ್ಪತ್ರೆ ಬಿಲ್ ತೆರಬೇಕಾಗುತ್ತದೆ. ಅದೇ ಕೆಲಸವನ್ನು ಎಷ್ಟೋ ವರ್ಷಗಳಿಂದ ನಮ್ಮ ಎರಡು ಕಿಡ್ನಿಗಳು ಮಾಡುತ್ತಾ ಇವೆ. ಅಲ್ಲಾಹನು ಲೆಕ್ಕ ಹಾಕಿ ಬಿಲ್ ಕೇಳಿದರೆ ಕೊಡಲು ನಮಗೆ ಸಾಧ್ಯವೇ? ಅಲ್ಲಾಹನು ತನ್ನ ಕೊನೆಯ ಪ್ರವಾದಿ ಮುಹಮ್ಮದ್(ಸ)ರವರ ಮೂಲಕ ಅವತೀರ್ಣಗೊಳಿಸಿದ ಸಾದ್ಯಂತ ಮಾರ್ಗದರ್ಶನವಾದ ಕುರ್‌ಆನನ್ನು ಸ್ವೀಕರಿಸಿ ವೇದನಾಯುಕ್ತ ಯಾತನೆಯಿಂದ ರಕ್ಷಣೆ ಹೊಂದುವ. ಅಲ್ಲಾಹನ ಔದಾರ್ಯವೊಂದೇ ನಮಗೆ ರಕ್ಷಣೆ!

•

# ಮಹಿಳೆಯರ ಮಯ್ಯಿತ್ತ್ ನಮಾಝ್ ತಡೆಯುವವರು!

ಆಯಿಶಾ ಸ್ವಲಾಹಿಯ್ಯಾ

ಒಬ್ಬ ಸತ್ಯವಿಶ್ವಾಸಿ ಮರಣ ಹೊಂದಿದರೆ ಆತನಿಗಾಗಿ ಮಯ್ಯಿತ್ತ್ ನಮಾಝ್ ನಿರ್ವಹಿಸುವುದು ಮತ್ತು ಪಾಪ ಮುಕ್ತಿಗಾಗಿ ಪ್ರಾರ್ಥಿಸುವುದು ಸಾಮಾಜಿಕ ಬಾಧ್ಯತೆಯಾಗಿದೆ. ಮೃತರ ಪಾಪಗಳು ಕ್ಷಮಿಸಲ್ಪಡಲು ಮತ್ತು ಅವರಿಗೆ ಕರುಣೆ ವರ್ಷಿಸಲು ಪ್ರಾರ್ಥನೆ ಸಹಕಾರಿಯಾಗಿದೆಯೆಂದು ಪ್ರವಾದಿ(ಸ)ರು ಕಲಿಸಿದ್ದಾರೆ. ಆತ್ಮಾರ್ಥವಾದ ಮತ್ತು ನಿಷ್ಕಳಂಕವಾದ ಪ್ರಾರ್ಥನೆ ಅಲ್ಲಾಹನ ಬಳಿ ಹೆಚ್ಚು ಪ್ರತಿಫಲಾರ್ಹವಾಗಿದೆ. ಅದರಲ್ಲಿ ಸ್ತ್ರೀ-ಪುರುಷರೆಂಬ ವ್ಯತ್ಯಾಸವಿಲ್ಲ.

ಮರಣ ಹೊಂದಿದ ವ್ಯಕ್ತಿಯನ್ನು ಹೆತ್ತು, ಹೊತ್ತು ಸಲಹಿದ ತಾಯಿ, ಜೀವಕ್ಕಿಂತಲೂ ಹೆಚ್ಚು ಪ್ರೀತಿಸುವ ಪತ್ನಿ ಮತ್ತು ಮಕ್ಕಳಲ್ಲಿ ಉಂಟಾಗುವ ಆತ್ಮಾರ್ಥತೆ ಬೇರೆ ಯಾರಲ್ಲೂ ಉಂಟಾಗಲಾರದು. ಅವರು ಮಹಿಳೆಯರೆಂಬ ಕಾರಣದಿಂದ ತಮ್ಮ ಪ್ರೀತಿ ಪಾತ್ರರಿಗಾಗಿ ಪಾಪ ವಿಮೋಚನೆಯನ್ನು ಬೇಡಿ ನಮಾಝ್ ನಿರ್ವಹಿಸುವ ಹಕ್ಕನ್ನು ಕಸಿಯಬಾರದು. ಪವಿತ್ರ ಕುರ್‌ಆನ್ ಹೇಳುತ್ತದೆ: "ಗಂಡಾಗಲಿ, ಹೆಣ್ಣಾಗಲಿ, ಯಾರು ಸತ್ಯವಿಶ್ವಾಸಿಯಾಗಿ ಸತ್ಕರ್ಮಗಳನ್ನು ಮಾಡುತ್ತಾರೋ ಅವರು ಸ್ವರ್ಗಕ್ಕೆ ಪ್ರವೇಶಿಸುವರು. ಅವರೊಡನೆ ಒಂದಿಷ್ಟೂ ಅನ್ಯಾಯ ತೋರಲಾಗುವುದಿಲ್ಲ". (ಕುರ್‌ಆನ್ 4:124) "ಪುರುಷನಾಗಲಿ, ಸ್ತ್ರೀಯಾಗಲಿ ನಿಮ್ಮ ಪೈಕಿ ಯಾರೊಬ್ಬನ ಕರ್ಮವನ್ನೂ ನಾನು ನಿಷ್ಫಲಗೊಳಿಸುವುದಿಲ್ಲ". (ಕುರ್‌ಆನ್ 3:195)

ಸಹ್‌ಲ್‌ಬ್‌ನು ಬೈದಾಅ್(ರ)ರವರ ಮಯ್ಯಿತ್ತನ್ನು ಮಸೀದಿಗೆ ತಂದು ಪ್ರವಾದಿ(ಸ)ರು ಮಯ್ಯಿತ್ತ್ ನಮಾಝ್ ನಿರ್ವಹಿಸುವಾಗ ಸತ್ಯವಿಶ್ವಾಸಿನಿಯರ ಮಾತೆಯರಾದ ಪ್ರವಾದಿ ಪತ್ನಿಯರು ಅದರಲ್ಲಿ ಪಾಲ್ಗೊಂಡದ್ದು ಮತ್ತು ಉತ್ಬ(ರ)ರಿಗಾಗಿ ಮಯ್ಯಿತ್ತ್ ನಮಾಝ್ ನಿರ್ವಹಿಸಲು ಉಮ್ಮು ಅಬ್ದಿಲ್ಲರನ್ನು ಉಮರ್(ರ)ರವರು ಕಾದು ನಿಂತದ್ದು ಚರಿತ್ರೆಯಲ್ಲಿದೆ. ಅಬೂತ್ವಲ್ಹಾ(ರ)ರವರ ಮಯ್ಯಿತ್ತ್ ನಮಾಝ್‌ನಲ್ಲಿ ಮಹಿಳೆಯರೂ ಪಾಲ್ಗೊಂಡಿದ್ದರೆಂದು ಪ್ರಬಲ ವರದಿಗಳಲ್ಲಿ ಉಲ್ಲೇಖಿಸಲಾಗಿದೆ. ಸಅ್‌ದುಬ್‌ನು ಅಬೀ ವಖಾಸ್(ರ)ರವರು ಮರಣ ಹೊಂದಿದಾಗ ವಿಶ್ವಾಸಿಗಳ ಮಾತೆಯರಿಗೆ ಮಯ್ಯಿತ್ತ್ ನಮಾಝ್ ನಿರ್ವಹಿಸಲಿಕ್ಕಾಗಿ ಮಯ್ಯಿತ್ತನ್ನು ಮಸೀದಿಗೆ ತರಲು ಆಜ್ಞಾಪಿಸಿದ್ದು ಬುಖಾರಿ ಮತ್ತು ಮುಸ್ಲಿಮ್ ಉಲ್ಲೇಖಿಸಿದ್ದಾರೆ.

ಮಹಿಳೆಯರು ಮಯ್ಯಿತ್ತ್ ನಮಾಝ್ ನಿರ್ವಹಿಸಿದ್ದ ಬಗ್ಗೆ ಇನ್ನೂ ಸಾಕಷ್ಟು ಪುರಾವೆಗಳಿವೆ. ಮಹಿಳೆಯರ ಮಯ್ಯಿತ್ ನಮಾಝನ್ನು ವಿರೋಧಿಸುವವರು ತಮ್ಮ ಪ್ರಮಾಣವಾಗಿ ಅಂಗೀಕರಿಸುವ ಶಾಫಿಈ ಮದ್‌ಹಬ್‌ನಲ್ಲಿ ಮಾತ್ರವಲ್ಲ, ತಮ್ಮದೇ ಪುಸ್ತಕ, ಪತ್ರಿಕೆಗಳಲ್ಲಿ ಸಹ ಸ್ತ್ರೀಯರ ಮಯ್ಯಿತ್ತ್ ನಮಾಝನ್ನು ಅಂಗೀಕರಿಸಿದ್ದಾಗಿ ಕಾಣಬಹುದಾಗಿದೆ. ಪುರುಷರಿದ್ದೂ ಅವರಾರೂ ನಮಾಝ್ ನಿರ್ವಹಿಸದೆ ಸ್ತ್ರೀಯರು ಮಾತ್ರ ನಮಾಝ್ ಮಾಡಿದರೆ ಜನಾಝ ನಮಾಝ್‌ನ ಕಡ್ಡಾಯ ಬಾಧ್ಯತೆ ತೀರಿಸಿದಂತಾಗುತ್ತದೆಯೇ ಇಲ್ಲವೇ ಎಂಬ ವಿಷಯದಲ್ಲಿ ಮಾತ್ರ ಶಾಫಿ ಮದ್‌ಹಬ್‌ನ ಗ್ರಂಥಗಳಲ್ಲಿ ಭಿನ್ನಾಭಿಪ್ರಾಯವಿದೆ.

ಪುರುಷರಿಗಿಂತ ಮುಂಚೆ ಸ್ತ್ರೀಯರು ಜನಾಝ ನಮಾಝ್ ನಿರ್ವಹಿಸಬಾರದೆಂಬ ವಾದ ಆಧಾರ ರಹಿತ. ಇಸ್ಲಾಮಿನ ಪ್ರಮಾಣಗಳಲ್ಲಾಗಲಿ, ಶಾಫಿಈ ಮದ್‌ಹಬ್‌ನಲ್ಲಾಗಲಿ ಈ ರೀತಿಯ ನಿಂಬಧನೆಯಿಲ್ಲ. ಸಅದುಬ್‌ನು ಅಬಿವಖಾಸ್(ರ)ರಿಗಾಗಿ ಪ್ರವಾದಿ ಪತ್ನಿಯರು ನಮಾಝ್ ನಿರ್ವಹಿಸಿದ್ದು ಪುರುಷರಿಗಿಂತ ಮುಂಚೆಯೋ ನಂತರವೋ ಎಂದು ಸ್ಪಷ್ಟಗೊಳಿಸದಿದ್ದುದು ಅದಕ್ಕಾಗಿಯೇ.

ಇಮಾಮ್ ಶಾಫಿಈ(ರ) ಹೇಳುತ್ತಾರೆ: "ಒಬ್ಬ ಮಹಿಳೆ ಇಮಾಮ್ ಆಗಿ ನಿಂತು ಇತರ ಸ್ತ್ರೀಯರು ಅವಳನ್ನು ಹಿಂಬಾಲಿಸಿ ಮಯ್ಯಿತ್ತ್ ನಮಾಝ್ ಮಾಡುವುದಕ್ಕೆ ಯಾವುದೇ ತೊಂದರೆಯನ್ನು ನಾನು ಕಾಣುವುದಿಲ್ಲ. ಅವಳು ಮಹಿಳೆಯರ ಮಧ್ಯದಲ್ಲಿ ನಿಲ್ಲಬೇಕು" (ಕಿತಾಬುಲ್ ಉಮ್ಮು, ಅಲ್ ಜನಾಯಿಸ್). ಇಮಾಮ್ ನವವಿ ಹೇಳುತ್ತಾರೆ: "ಮಹಿಳೆಯರು ಜಮಾಅತ್ ಆಗಿ ಮಯ್ಯಿತ್ತ್ ನಮಾಝ್ ನಿರ್ವಹಿಸುವುದು ಇತರ ನಮಾಝ್‌ಗಳಂತೆಯೇ ಸುನ್ನತ್ತಾಗಿದೆ" (ಶರಹುಲ್ ಮುಹದ್ದಬ್). ಮಯ್ಯಿತ್ತ್‌ಗಾಗಿ ಮಹಿಳೆಯರು ಮಾತ್ರ ಜಮಾಅತ್ತಾಗಿ ನಮಾಝ್ ನಿರ್ವಹಿಸುವುದು ಸುನ್ನತ್ತಾಗಿದೆ" (ಖಲ್ಯೂಬಿ).

"ಮಹಿಳೆಯರು ಜಮಾಅತ್ತಾಗಿ ಮಯ್ಯಿತ್ತ್ ನಮಾಝ್ ನಿರ್ವಹಿಸುವುದು ಇತರ ನಮಾಝ್‌ಗಳಂತೆಯೇ ಸುನ್ನತ್ತಾಗಿದೆ. ಇದುವೇ ಪ್ರಬಲ ಅಭಿಪ್ರಾಯ" (ಶರ್ವಾನಿ). ಸಂಪ್ರದಾಯವಾದಿ ಸುನ್ನಿಗಳ ಪತ್ರಿಕೆ, ಪುಸ್ತಕಗಳಲ್ಲೂ ಈ ಸತ್ಯವನ್ನು ಉಲ್ಲೇಖಿಸಿದ್ದಾರೆ. "ಮಯ್ಯಿತ್ತ್ ನಮಾಝ್ ನಿರ್ವಹಿಸಬೇಕಾದವರು ಪುರುಷರು. ಪುರುಷರನ್ನು ಹಿಂಬಾಲಿಸಿ ಸ್ತ್ರೀಯರೂ ನಮಾಝ್ ನಿರ್ವಹಿಸುವುದು ಸುನ್ನತ್ತಾಗಿದೆ. ಸ್ತ್ರೀಯರು ಸ್ವತಃ ನಮಾಝ್ ನಿರ್ವಹಿಸಬಹುದಾಗಿದೆ" (ಕೆ.ವಿ.ಎಂ. ಮುಸ್ಲಿಯಾರ್, ಪಂದಾವೂರ್, ಮರಣ, ಮಯ್ಯಿತ್ತ್ ನಮಾಝ್, ಝಿಯಾರತ್ ಪುಟ 28).

"ಮೊದಲು ಪುರುಷರು, ಬಳಿಕ ಮಕ್ಕಳು, ಆ ಬಳಿಕ ಸ್ತ್ರೀಯರು ಎಂಬ ರೀತಿಯಲ್ಲಿ ಮಯ್ಯಿತ್ತ್‌ನ ಸಮೀಪ ನಿಲ್ಲಬೇಕು. ಆದರೆ ಮೊದಲು ಬಂದದ್ದು ಸ್ತ್ರೀಯಾಗಿದ್ದರೆ ಅವಳು ಮುಂದಿನಿಂದ ನಿಲ್ಲಬಾರದು. ತನ್ನ ನಂತರ ಬಂದ ಪುರುಷನಿಗೆ ಸೌಕರ್ಯ ಮಾಡಿಕೊಟ್ಟು ಹಿಂದಕ್ಕೆ ಹೋಗಬೇಕು" (ಉಮ್ದ ಭಾಷಾಂತರ, ಪುಟ 80).

ಮರಣದ ವೇಳೆ ಋತುಮತಿಯಾಗಿದ್ದವರು ಅಥವಾ ಅವಿಶ್ವಾಸಿನಿಯಾಗಿದ್ದವರು ಮಯ್ಯಿತ್ ದಫನದ ಬಳಿಕ ಅಶುದ್ಧಿಗಳಿಂದ ಮುಕ್ತರಾಗಿ ಮಯ್ಯಿತ್ ನಮಾಝ್ ಮಾಡಿದರೆ ಆ ನಮಾಝ್ ಸಿಂಧುವಾಗುವುದಿಲ್ಲ. (ಫತ್‌ಹುಲ್ ಮುಈನ್ ಭಾಷಾಂತರ, ಪುಟ 190)

ಮಹಿಳೆಯರು ಮಯ್ಯಿತ್ ನಮಾಝ್ ನಿರ್ವಹಿಸುವುದನ್ನು ಕಠಿಣವಾಗಿ ವಿರೋಧಿಸುವ ಸುನ್ನಿ ವಿಭಾಗದ ನೇತಾರ ಕಾಂತಪುರಂ ಅಬೂಬಕರ್ ಮುಸ್ಲಿಯಾರ್ ಮುನ್ನುಡಿ ಬರೆದ ಗ್ರಂಥ'ದಲ್ಲಿ ಹೀಗಿದೆ: "ಮಹಿಳೆಯರು ಮಯ್ಯಿತ್ ನಮಾಝ್ ನಿರ್ವಹಿಸುವುದು ಮತ್ತು ಅದನ್ನು ಜಮಾಅತ್ತಾಗಿ ನಿರ್ವಹಿಸುವುದು ಸುನ್ನತ್ತಾಗಿದೆ" (ಆಧುನಿಕ ಸಮಸ್ಯೆಗಳು ಫಿಕ್‌ಹ್‌ನಲ್ಲಿ 1-72).

"ಮಹಿಳೆಯರಿಗೆ ಮಯ್ಯಿತ್ತ್ ನಮಾಝ್ ಹರಾಮ್ ಎಂದು ಭಾವಿಸಿದ ಬಹಳಷ್ಟು ಮಂದಿಯಿದ್ದಾರೆ. ಹೀಗಾಗಿ ಮಯ್ಯಿತ್ತ್ ನಮಾಝ್‌ನ ರೀತಿ ಅವರಿಗೆ ತಿಳಿದಿಲ್ಲ. ಈ ತಪ್ಪು ಭಾವನೆಯನ್ನು ತೊಲಗಿಸಲಿಕ್ಕಾಗಿ ಮತ್ತು ಮಯ್ಯಿತ್ತ್ ನಮಾಝ್‌ನ ಪ್ರತಿಫಲ ಅವರಿಗೆ ಸಿಗಲಿಕ್ಕಾಗಿ ಮಯ್ಯಿತ್ತ್ ಕೊಂಡು ಹೋಗುವುದಕ್ಕಿಂತ ಮುಂಚೆ ಮಹಿಳೆಯರಿಗೆ ಮನೆಯಲ್ಲೇ ನಮಾಝ್ ನಿರ್ವಹಿಸಲು ಅವಕಾಶ ಮಾಡಿಕೊಡುವುದು ಒಳ್ಳೆಯದು. (ಸಿ.ವಿ. ಎಂ ಫೈಝಿ, ಮರಣದಿಂದ ಮಕ್‌ಬರ ತನಕ, ಪುಟ 8, 9).

ಒಟ್ಟಿನಲ್ಲಿ ಮಯ್ಯಿತ್ತ್ ನಮಾಝ್ ಪುಣ್ಯ ಹಾಗೂ ಪ್ರತಿಫಲಾರ್ಹವಾದ ಮತ್ತು ಮರಣ ಹೊಂದಿದವರ ಪಾಪಗಳು ಕ್ಷಮಿಸಲ್ಪಡಲು ಕಾರಣವಾಗುವ ಸತ್ಕರ್ಮವಾಗಿದೆಯೆಂದು ಸ್ಪಷ್ಟವಾಗುತ್ತದೆ. ಆದರೆ ಬಹುತೇಕ ಸುನ್ನಿ ಮುಸ್ಲಿಯಾರ್‌ಗಳು ಮಹಿಳೆಯರು ಮಯ್ಯಿತ್ತ್ ನಮಾಝ್ ಮಾಡದಂತೆ ತಡೆಯುವುದನ್ನು ಕಾಣಬಹುದಾಗಿದೆ. ಮಾತ್ರವಲ್ಲ, ಮಯ್ಯಿತ್ತ್ ನಮಾಝ್‌ನ ನೇತೃತ್ವವನ್ನು ಮರಣಗೊಂಡವರ ಬಂಧುಗಳಿಗೆ ಬಿಟ್ಟುಕೊಡದೆ, ಮೃತನ ಮಗನಾಗಿ ಅಥವಾ ತಂದೆಯಾಗಿ ಅಥವಾ ಗಂಡನಾಗಿ ವರ್ತಿಸುವ ಮುಸ್ಲಿಯಾರ್‌ಗಳು ತಾವೇ ಮಯ್ಯಿತ್ತ್ ನಮಾಝ್‌ನ ನೇತೃತ್ವ ವಹಿಸುತ್ತಾರೆ. ಮಯ್ಯಿತ್ತ್‌ನ ಹಣಕ್ಕಾಗಿ ಯಾರ್‍ಯಾರ ತಂದೆಯಾಗಿ, ಮಗನಾಗಿ, ಗಂಡನಾಗಿ ವೇಷ ಬದಲಿಸುವ ಧರ್ಮಭ್ರಷ್ಟ ಮುಸ್ಲಿಯಾರ್‌ಗಳು, ತರಾವೀಹ್ ನಮಾಝ್‌ಗಳಲ್ಲಿ ಮಹಿಳೆಯರು ಮತ್ತು ಮಯ್ಯಿತ್ತ್ ನಮಾಝ್‌ಗಳಲ್ಲಿ ಪಾಲ್ಗೊಳ್ಳದಂತೆ ತಡೆದು ಈ ನಮಾಝ್‌ಗಳೆಲ್ಲಾ ಪುರುಷರಿಗೆ ಮಾತ್ರವೆಂಬಂತೆ ಚಿತ್ರೀಕರಿಸಿದ್ದಾರೆ. ಈ ಮುಸ್ಲಿಯಾರ್‌ಗಳು ಹೇಳುವ ದೀನ್ ನೈಜ ಇಸ್ಲಾಮ್ ಅಲ್ಲವೆಂಬುದನ್ನು ಮುಸ್ಲಿಮ್ ಸಮುದಾಯ ಮನಗಾಣಬೇಕು. •

## ಇಸ್ಲಾಮಿ ಸಂಘಟನೆಗಳ ದೌತ್ಯ ಮತ್ತು ಮಾರ್ಗ

(8ನೇ ಪುಟದಿಂದ)

ಪರಿಚಯಿಸುವ ಮೂಲಕ ಮಾನವ ಸಮೂಹವನ್ನು ಏಕ ದೇವಾರಾಧನಾ ತತ್ವದಡಿ ಒಗ್ಗೂಡಿಸುವುದು, ಅಲ್ಲಾಹನನ್ನೂ ಅವನ ವಿಶುದ್ಧ ಗ್ರಂಥವನ್ನೂ ಅವರ ರಸೂಲರನ್ನೂ ಅವರ ಸುನ್ನತ್ತನ್ನೂ ಮಾನವ ರಾಶಿಯ ಮುಂದೆ ಸಾದರ ಪಡಿಸುವುದು ಇಸ್ಲಾಮಿ ಸಂಘಟನೆಗಳ ಮಹತ್ತರ ದೌತ್ಯವಾಗಿದೆ. ಇದುವೇ ಭೂಮಿಗೆ ಬಂದ ಎಲ್ಲಾ ಪ್ರವಾದಿಗಳು ಅನುಸರಿಸಿದ ಮಾರ್ಗ. ಈ ಮಾರ್ಗಕ್ಕೆ ವ್ಯತಿರಿಕ್ತವಾಗಿ ಅಲ್ಲಾಹನನ್ನು ಬಿಟ್ಟು ಅವನ ಸೃಷ್ಟಿಗಳಾದ ಅಂಬಿಯಾಗಳೊಡನೆ ಇಸ್ತಿಗಾಸ ಮಾಡಿ ಪ್ರಾರ್ಥಿಸಲು ಕಲಿಸುವ ಮತ್ತು ಜಿನ್ನ್, ಮಲಕ್‌ಗಳೊಡನೆ ಸಹಾಯಾರ್ಥನೆ ಮಾಡಲು ಕಲಿಸುವ ಮೂಲಕ ಮುಸ್ಲಿಮ್ ಸಮುದಾಯದಲ್ಲಿ ಬಿಕ್ಕಟ್ಟನ್ನು ಬೆಳೆಸುವ ವಿಚ್ಛಿದ್ರಕಾರಿಗಳ ಕುರಿತು ಅಲ್ಲಾಹು ಹೇಳುವುದನ್ನು ನೋಡಿರಿ:

"ನಿಶ್ಚಯವಾಗಿಯೂ ತಮ್ಮ ಧರ್ಮವನ್ನು ವಿನ್ನಭಿನ್ನಗೊಳಿಸಿ ಹಲವು ಪಂಗಡಗಳಾಗಿ ಮಾಡಿದವರ ಕುರಿತು ನಿಮಗೇನೂ (ಹೊಣೆಗಾರಿಕೆ)ಯಿಲ್ಲ. ಅವರ ವಿಷಯವು ಅಲ್ಲಾಹನ ಬಳಿ ಮಾತ್ರವೇ (ಇತ್ಯರ್ಥವಾಗಲಿದೆ) ಆ ಬಳಿಕ ಅವನು ಅವರು ಮಾಡುತ್ತಿದ್ದುದರ ಕುರಿತು ಅವರಿಗೆ ತಿಳಿಸಿ ಕೊಡುವನು." (ಕುರ್‌ಆನ್ 6:159) •

# ಹಾಝಾ ಮಿನ್ ಫಝ್‌ಲಿ ರಬ್ಬೀ...

ಹಣವಂತರು, ದೊಡ್ಡ, ಭವ್ಯ ಮನೆಗಳನ್ನು ಕಟ್ಟಿಸುತ್ತಾರೆ. ಮನೆಯ ಪ್ರವೇಶದ್ವಾರದಲ್ಲಿ 'ಹಾಝಾಮಿನ್ ಫಝುಲ್ ರಬ್ಬೀ...' ಎಂಬ ಬೋರ್ಡನ್ನು ಹಾಕುತ್ತಾರೆ. 'ಇದು ನನ್ನ ಪ್ರಭುವಿನ ಔದಾರ್ಯಗಳಲ್ಲೊಂದು' ಎಂದರ್ಥ. ಇದೊಂದು ಕುರ್‌ಆನ್ ವಾಕ್ಯ. ಪ್ರವಾದಿ ಸುಲೈಮಾನ್(ಅ)ರವರು ತನ್ನ ರಾಜಸಭೆಗೆ ಆಗಮಿಸುತ್ತಿರುವ ಬಿಲ್ಕೀಸ್ ರಾಣಿಗೆ ತನ್ನ ಪ್ರವಾದಿತ್ವ ಸತ್ಯವೆಂಬುದನ್ನು ತೋರಿಸಿಕೊಡುವ ನಿರ್ಧಾರ ಮಾಡುತ್ತಾರೆ. ಸಾವಿರಾರು ಮೈಲುಗಳಾಚೆಯ ಒಂದು ರಾಜ್ಯದ ರಾಣಿಯಾಗಿದ್ದ ಬಿಲ್ಕೀಸ್ ಬಹುದೈವಾರಾಧನೆ ಮಾಡುತ್ತಿದ್ದರು. ಆಕೆ ಏಕದೇವ ಸಿದ್ಧಾಂತ ಸ್ವೀಕರಿಸಿದರೆ ಅವಳ ರಾಜ್ಯದ ಎಲ್ಲಾ ಪ್ರಜೆಗಳೂ ಹಿದಾಯತ್ ಪಡೆದಾರು ಎಂಬುದಾಗಿತ್ತು ಪ್ರವಾದಿ ಸುಲೈಮಾನ್(ಅ)ರವರ ಬಯಕೆ. ಆದ್ದರಿಂದ ಅವಳನ್ನು ತೌಹೀದ್‌ಗೆ ಆಮಂತ್ರಿಸುತ್ತಾ ಒಂದು ಪತ್ರ ಬರೆದು ಕಳುಹಿಸಿದ್ದರು. ಪತ್ರವನ್ನೋದಿದ ಬಿಲ್ಕೀಸ್ ರಾಣಿ ಧಿಕ್ಕಾರ ತೋರಲಿಲ್ಲ. ಸತ್ಯವನ್ನು ಗ್ರಹಿಸಿಕೊಳ್ಳುವ ಜಿಜ್ಞಾಸೆ ಪ್ರಕಟಿಸಿದರು. ಅದಕ್ಕಾಗಿ ಪರಿವಾರ ಸಮೇತ ಪ್ರವಾದಿ ಸುಲೈಮಾನ್(ಅ)ರವರ ಬಳಿಗೆ ಆಗಮಿಸುವುದಾಗಿ ಪ್ರತ್ಯುತ್ತರ ಬರೆದರು. ಅವರನ್ನು ಬರಮಾಡಿಕೊಳ್ಳಲು ರಾಜರೂ ಕೂಡಾ ಆಗಿದ್ದ ಪ್ರವಾದಿ ಸುಲೈಮಾನ್(ಅ)ರವರು ಉತ್ತಮ ವ್ಯವಸ್ಥೆಯನ್ನು ಮಾಡಿಸಿದರು. ಸುಲೈಮಾನರ(ಅ) ಪ್ರವಾದಿತ್ವವನ್ನು ಆಕೆಗೆ ಮನವರಿಕೆ ಮಾಡಿಕೊಡಲು ಅಲ್ಲಾಹನು ಅವರ ಮುಖಾಂತರ ಒಂದು ಪವಾಡವನ್ನು ತೋರಿಸಿದನು. ಬಿಲ್ಕೀಸ್ ರಾಣಿ ಹೊರಟು ನೂರಾರು ಮೈಲುಗಳ ಪ್ರಯಾಣ ನಡೆಸಿ ಪ್ರವಾದಿ ಸುಲೈಮಾನ್‌ರವರ ರಾಜಸಭೆಗೆ ಕೆಲವೇ ತಾಸುಗಳೊಳಗೆ ತಲುಪುವ ಸುದ್ದಿ ಸಿಕ್ಕಿತು. ಅಲ್ಲಾಹನ ಆಜ್ಞೆಯಂತೆ ಆಕೆ ತಲುಪುವ ಮೊದಲೇ ಆಕೆಯ ಅರಮನೆಯಲ್ಲಿ ಭದ್ರವಾಗಿ ಬೀಗ ಹಾಕಿದ ಕೋಣೆಯೊಳಗಿದ್ದ ಬೃಹತ್ ಸಿಂಹಾಸನವನ್ನು ತನ್ನ ಆಸ್ಥಾನಕ್ಕೆ ತಂದಿರಿಸುವ ಪವಾಡವನ್ನು ಸುಲೈಮಾನ್(ಅ) ತೋರಿಸಿದರು. ಲೌಕಿಕವಾದ ಯಾವ ವಿಧಾನದಲ್ಲೂ ಆ ಸಿಂಹಾಸನ ಅಲ್ಲಿಗೆ ತಲುಪುವುದು ಅಸಾಧ್ಯವಾಗಿತ್ತು. ಭದ್ರವಾದ ಕಲ್ಲಿನ ಕೋಟೆಯೊಳಗೆ ಇರುವ ಅರಮನೆಯ ಅಂತಃಪುರದಲ್ಲಿ ಬಹಳ ಭದ್ರತೆಯಿಂದ ಇರಿಸಲಾಗಿತ್ತಲ್ಲದೆ ಸುತ್ತಲೂ ಸಶಸ್ತ್ರ ಕಾವಲುಗಾರರನ್ನು ನಿಲ್ಲಿಸಲಾಗಿತ್ತು. ಯಾಕೆಂದರೆ ಅದು ಅತ್ಯಂತ ಅಮೂಲ್ಯ ಸೊತ್ತಾಗಿತ್ತು. ಎಂಬತ್ತು ಮೊಳ ಉದ್ದ, ಅದಕ್ಕೆ ತಕ್ಕುದಾದ ಅಗಲದಲ್ಲಿದ್ದ ಸಿಂಹಾಸನವು ಚಿನ್ನ, ಬೆಳ್ಳಿ, ವಜ್ರ, ವೈಢೂರ್ಯ ಮುಂತಾದ ಅಮೂಲ್ಯ ವಸ್ತುಗಳಿಂದ ನಿರ್ಮಿಸಲ್ಪಟ್ಟದ್ದಾಗಿತ್ತು. ಹಾಗಾಗಿ ಅದಕ್ಕೆ ಸೂಕ್ತ ಭದ್ರತೆಯನ್ನು ಒದಗಿಸಲಾಗಿತ್ತು. ಇನ್ನು ಭದ್ರತಾ ಪಡೆಯನ್ನು ಹೊಡೆದೋಡಿಸಿ ಅಪಹರಿಸಿದರೂ ಕೂಡಾ ಸಾವಿರಾರು ಮೈಲುಗಳಾಚೆಗೆ ಅದನ್ನು ಸಾಗಿಸುವುದೇ ಬಹಳ ಸಾಹಸ ಹಾಗೂ ದೀರ್ಘ ಸಮಯ ಬೇಕಾಗುತ್ತಿತ್ತು. ಆದ್ದರಿಂದ ಕೆಲವೇ ತಾಸಿನೊಳಗೆ ಅಷ್ಟು ದೂರದಿಂದ ಆ ಸಿಂಹಾಸನವು ಸುಲೈಮಾನ್(ಅ)ರವರ ಸಭೆಗೆ ಹಾಜರಾಗುವುದು ಒಂದು ಅದ್ಭುತ ಪವಾಡವಾಗಿತ್ತು.

ಆ ಪವಾಡ ನಡೆಯಿತು. ಬಿಲ್ಕೀಸ್ ರಾಣಿ ಬಂದಾಗ "ನಿಮ್ಮ ಸಿಂಹಾಸನ ಹೀಗೆ ಇದೆಯೇ? ಎಂದು ಸುಲೈಮಾನ್(ಅ)ರವರು ಕೇಳಿದರು." ಹೌದು, ಹೀಗೆಯೇ ಇದೆ ಎಂದರು ಬಿಲ್ಕೀಸ್. ಆಗ ಸುಲೈಮಾನ್(ಅ) ಇದು ನಿಮ್ಮದೇ ಸಿಂಹಾಸನ ಎಂದರು. ಈ ಪವಾಡದಿಂದ ಬೆರಗಾದ ಬಿಲ್ಕೀಸ್ ಸುಲೈಮಾನ್(ಅ)ರವರ ಪ್ರವಾದಿತ್ವವನ್ನು ಅಂಗೀಕರಿಸಿದರು.

ಬಿಲ್ಕೀಸ್ ರಾಣಿ ತಲುಪುವ ಮೊದಲೇ ತನ್ನ ಎದುರಿಗೆ ಸಿಂಹಾಸನ ತಲುಪಿದಾಗ ಸುಲೈಮಾನ್(ಅ)ರವರು ಹೇಳಿದ ಉದ್ಗಾರವಾಗಿದೆ. "ಹಾಝಾ ಮಿನ್ ಫಝ್‌ಲಿ ರಬ್ಬೀ..." ಎಂಬ ವಾಕ್ಯ. ಕುರ್‌ಆನಿನಲ್ಲಿ ಪ್ರಸ್ತುತ ಘಟನೆಯನ್ನು ವಿವರಿಸುವಲ್ಲಿ ಸುಲೈಮಾನ್(ಅ)ರವರ ಈ ಉದ್ಗಾರವನ್ನು ಕಾಣಬಹುದು. ಆದ್ದರಿಂದ ಈ ವಾಕ್ಯವು ಒಂದು ಕುರ್‌ಆನ್ ವಾಕ್ಯ ಕೂಡಾ ಆಗಿರುತ್ತದೆ. "ಈ ಭವ್ಯ ಮನೆ ನನ್ನ ಪ್ರಭುವು ನನಗೆ ನೀಡಿದ ಔದಾರ್ಯಗಳಲ್ಲೊಂದು" ಎಂಬ ಅರ್ಥವತ್ತಾದ ಆಶಯವನ್ನು ಅದು ಕೊಡುತ್ತದೆ. ಆದ್ದರಿಂದ ಹಾಗೆ ಘೋಷಿಸುವುದು ಪ್ರಶಂಸನೀಯವೆನ್ನುವುದರಲ್ಲಿ ಸಂಶಯವಿಲ್ಲ.

ಆದರೆ ಅದೇ ಆಯತ್‌ನ ಮುಂದಿನ ಭಾಗವನ್ನು ನೆನಪಿಟ್ಟುಕೊಂಡು ಜೀವನದುದ್ದಕ್ಕೂ ಜಾಗ್ರತೆ ಪಾಲಿಸಿದರೆ ಪೂರ್ಣ ನಿಷ್ಠೆಯಾಗುತ್ತದೆ. "ನಾನು ಕೃತಜ್ಞನಾಗುವೆನೋ ಅಥವಾ ಕೃತಘ್ನನಾಗುವೆನೋ ಎಂಬ ಪರೀಕ್ಷೆಗಾಗಿ ಎಂದಾಗಿರುತ್ತದೆ ಆಯತ್‌ನ ಮುಂದಿನ ಅರ್ಧ ಭಾಗ." ಅಲ್ಲಾಹನು ಕೊಡುವ ಅನುಗ್ರಹದಲ್ಲಿ ಪರೀಕ್ಷೆಯಿರುತ್ತದೆ. ಕೆಲವರಿಗೆ ಸುಖ ಕೊಟ್ಟು ಪರೀಕ್ಷಿಸಿದರೆ ಕೆಲವರಿಗೆ ಕಷ್ಟಕೊಟ್ಟು ಪರೀಕ್ಷಿಸುತ್ತಾನೆ. ಸುಖವೋ ಕಷ್ಟವೋ ಎನ್ನುವುದು ಮುಖ್ಯವಲ್ಲ. ಅವೆರಡೂ ಅಲ್ಲಾಹನ ಪರೀಕ್ಷೆ. ಅವೆರಡರಲ್ಲಿ ಯಾವ ಪರೀಕ್ಷೆ ಬಂತೋ ಅದರಲ್ಲಿ ಜಯಗಳಿಸಬೇಕಾದ ುದು ನಮ್ಮ ಬಾಧ್ಯತೆ.

"ಇದು ನನ್ನ ಮೇಲಿನ ಪರೀಕ್ಷೆಗಾಗಿ" ಎಂದು ಸುಲೈಮಾನ್(ಅ)ರವರು ಹೇಳಿದ ಸಂದರ್ಭವನ್ನು ನಾವು ಅಲೋಚಿಸಬೇಕು. ಬಿಲ್ಕೀಸ್ ರಾಣಿಯ ಸಿಂಹಾಸನ ಕ್ಷಣದೊಳಗೆ ಅವರ ಬಳಿ ಹಾಜರಾದುದರಿಂದ ಅವರಿಗೆ ವ್ಯಕ್ತಿಗತವಾಗಿ ಯಾವ ಲಾಭವೂ ಇರಲಿಲ್ಲ. ಲೌಕಿಕವಾದ ಯಾವ ಆಸೆಯೂ ಅವರಿಗೆ ಇದ್ದಿರಲಿಲ್ಲ. ಅಪಾರ ಐಶ್ವರ್ಯದ ಒಡೆಯರೂ ಆಗಿದ್ದ ಅವರ ಪಾಲಿಗೆ ಆ ಸಿಂಹಾಸನ ಲೆಕ್ಕಕ್ಕೇ ಇರಲಿಲ್ಲ. ಅಲ್ಲದೆ ಅದನ್ನವರು ಸ್ವಂತಕ್ಕಾಗಿ ಇಟ್ಟುಕೊಂಡರೆಂದು ಕುರ್‌ಆನಿನಲ್ಲಿ ಇಲ್ಲ. ಸಿಂಹಾಸನ ಬಂದು ತಲುಪಿದ ಚರಿತ್ರೆಯೊಂದಿಗೆ ಕುರ್‌ಆನಿನಲ್ಲಿ ಆ ಚರಿತ್ರೆ ಮುಕ್ತಾಯವಾಗುತ್ತದೆ. ಅದನ್ನು ಮತ್ತೆ ಏನು ಮಾಡಲಾಯಿತು ಎಂಬ ಪ್ರಸ್ತಾಪ ಇಲ್ಲ. ಚರಿತ್ರೆಯ ಮುಖ್ಯಾಂಶವೇ ಕುರ್‌ಆನಿನ ಚರಿತ್ರೆಯ ಉದ್ದೇಶವಾಗಿರುವುದರಿಂದ ಕೊನೆಯವರೆಗೆ ಚರಿತ್ರೆ ಹೇಳಿ ಮುಗಿಸುವ ಪರಿಪಾಠ ಕುರ್‌ಆನ್ ಅವಲಂಬಿಸಿಲ್ಲ. ಹಾಗೆ ಅವಲಂಬಿಸಿದ್ದರೆ ಕುರ್‌ಆನ್ ಮಿತಿಮೀರಿ ದೀರ್ಘವಾಗುತ್ತಿತ್ತು.

ಸಿಂಹಾಸನ ಬಂದು ತಲುಪಿದಾಗ "ಹಾಝಾ ಮಿನ್ ಫಝ್‌ಲಿ ರಬ್ಬೀ..." ಎಂಬ ಅವರ ಉದ್ಗಾರವು ಲೌಕಿಕವಾದ ಒಂದು ಅನುಗ್ರಹ ದೊರೆಯಿತು. ಎಂಬ ದೃಷ್ಟಿಯಿಂದಾಗಿರಲಿಲ್ಲ. ಈ ಪವಾಡವನ್ನು ಕಂಡು ಬಿಲ್ಕೀಸ್ ರಾಣಿ ಸತ್ಯವನ್ನು ಸ್ವೀಕರಿಸುತ್ತಾಳೆ. ಅದರಿಂದಾಗಿ ಅವಳ ರಾಜ್ಯದ ಎಲ್ಲರೂ ಸತ್ಯಧರ್ಮವನ್ನು ಅವಲಂಬಿಸುತ್ತಾರೆ. ಇಂತಹ ಒಂದು ಮಹತ್ವದ ಪರಿವರ್ತನೆ ನಿಮಿತ್ತವಾಗುವ ಭಾಗ್ಯ ನನಗೆ ದೊರೆತದ್ದು ಅಲ್ಲಾಹು ನನಗೆ ಕೊಟ್ಟ ಅನುಗ್ರಹಗಳಲ್ಲಿ ಒಂದಾಗಿದೆ ಎಂದಾಗಿರುತ್ತದೆ ಅವರ ಪ್ರಸ್ತುತ ಮಾತಿನ ಮರ್ಮ. ಅಂದರೆ ಐಹಿಕ ಅನುಗ್ರಹವಲ್ಲ, ಸಂಪೂರ್ಣ ಪಾರತ್ರಿಕ ಅನುಗ್ರಹ ಎಂದರ್ಥ. ಅಂತಹ ಅನುಗ್ರಹ ಪ್ರಾಪ್ತವಾದಾಗಲೂ "ಇದು ನನ್ನ ಪರೀಕ್ಷೆಗಾಗಿ" ಎಂದು ಅವರು ಹೇಳಿದ್ದು ಗಮನಾರ್ಹ. ಪಾರತ್ರಿಕವಾದ ಅನುಗ್ರಹ ದೊರೆತಾಗಲೂ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಬೇಕಾದ ಬಾಧ್ಯತೆ ನಮಗೆ ಇದೆ ಎಂದಾಯಿತು. ನಾನು ಒಂದು ದಾನ ಮಾಡಿದರೆ ಅದಕ್ಕೆ ಅವಕಾಶ ಮಾಡಿಕೊಟ್ಟದ್ದಕ್ಕಾಗಿ ಅಲ್ಲಾಹನಿಗೆ ಕೃತಜ್ಞತೆ ಹೇಳಬೇಕಾಗುತ್ತದೆ. ರಾತ್ರಿ ನಿದ್ದೆಯಿಂದ ಎದ್ದು ತಹಜ್ಜುದ್ ಮಾಡಿದರೂ ಆ ಅನುಗ್ರಹ ದೊರೆತದ್ದಕ್ಕಾಗಿ ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಬೇಕಾದ ಬಾಧ್ಯತೆ ನಮ್ಮದಾಗುತ್ತದೆ.

ಭವ್ಯ, ಅದ್ದೂರಿಯ ಬಂಗಲೆ ಕಟ್ಟಿಸಿ ಅದರ ಎದುರುಗಡೆ 'ಹಾಝಾ ಮಿನ್ ಫಝ್‌ಲಿ ರಬ್ಬೀ...' ಎಂದು ಬರೆಸುವವರು ಆ ಆಯತ್‌ನ ಹಿನ್ನಲೆಯನ್ನು ಅರಿತಿರಬೇಕು ಎಂಬ ಉದ್ದೇಶದಿಂದ ಇಷ್ಟು ವಿವರಿಸಲಾಯಿತು. ಅದು ಪ್ರವಾದಿ ಸುಲೈಮಾನ್‌ರವರು ತನಗೆ ಪಾರತ್ರಿಕ ಅನುಗ್ರಹ ದೊರೆತ ಸಂದರ್ಭದಲ್ಲಿ ಹೇಳಿದ ಮಾತು ಎಂಬುದನ್ನೂ ಅದರ ಬೆನ್ನಿಗೇ ಅವರು 'ಇದು ನನ್ನ ಪರೀಕ್ಷೆಗಾಗಿ' ಎಂದು ಕೂಡಾ ಹೇಳಿದ್ದರು ಎಂಬುದನ್ನೂ ನಾವು ಮರೆಯಬಾರದು. ಈ ಭವ್ಯ ಮನೆಯನ್ನು ಕಟ್ಟಿಸಲು ಅಧಿಕೃತ ಶಕ್ತಿ, ಅವಕಾಶಗಳನ್ನು ನೀಡಿದ್ದಲ್ಲದೆ ಈ ಮನೆಯಲ್ಲಿ ರಕ್ಷಣೆ, ಇಲ್ಲಿ ವಾಸಿಸಲು ಆರೋಗ್ಯ, ಆಯುಷ್ಯವನ್ನು ಕೊಡುವುದು ಅಲ್ಲಾಹನು, ಈ ಮನೆಯನ್ನು ಮಾರಬೇಕಾದಂತಹ ದುಸ್ಥಿತಿ ಕೊಡದೆ ಆರ್ಥಿಕ ಸುಸ್ಥಿತಿಯನ್ನು ಉಳಿಸಿಕೊಂಡು ಬರುತ್ತಿರುವುದು ಕೂಡಾ ಅಲ್ಲಾಹನು ಎಂಬ ಪ್ರಜ್ಞೆ ಇರಬೇಕು. ಹಾಗಾಗಿ ಕೃತಜ್ಞತಾ ಭಾವ ಸದಾ ಇರಬೇಕು. ಅಹಂಭಾವ, ಬಡವರ ಮೇಲೆ ಅಣಕ, ಬೊಗಳೆ ಮುಂತಾದವುಗಳನ್ನು ತ್ಯಜಿಸಿ, ಸದಾ ವಿನಯಾನ್ವಿತ ಭಾವದಲ್ಲಿ ಇರುವುದು ಅಲ್ಲಾಹನು ನೀಡಿದ ಈ ಅನುಗ್ರಹಕ್ಕೆ ಕೊಡುವ ಕೃತಜ್ಞತೆಗೆ ಸೇರುತ್ತದೆ. ಹಾಗಾದರೆ ಮಾತ್ರ ಈ ಪರೀಕ್ಷೆಯಲ್ಲಿ ಜಯ. ಈ ಮನೆ ಮತ್ತು ಐಶ್ವರ್ಯ ನನಗೆ ಅಲ್ಲಾಹನು ನೀಡಿದ ಔದಾರ್ಯ ನಿಜ. ಆದರೆ ಇದರಲ್ಲಿ ಅವನ ಪರೀಕ್ಷೆಯೂ ಇದೆ. ಈ ಪರೀಕ್ಷೆಯಲ್ಲಿ ನಾನು ಜೈಸಬೇಕು ಎಂಬ ಪ್ರಜ್ಞೆ ಹಾಗೂ ಆ ನಿಟ್ಟಿನಲ್ಲಿ ಕ್ರಿಯಾತ್ಮಕತೆಯನ್ನು ಉಳಿಸಿಕೊಂಡು ಬಂದರೆ ಮೇಲೆ ಬರೆದಿಡುವ "ಹಾಝಾಮಿನ್ ಫ಼ಝ್‌ಲಿ ರಬ್ಬೀ..." ಅನ್ವರ್ಥವಾಗುತ್ತದೆ. ●

# ಪರಿವರ್ತನೆಯ ಇಸ್ಲಾಮೀ ಇತಿಹಾಸ

(2ನೇ ಪುಟದಿಂದ)

ಹರಿಸುವ ಕರುಣಾಮಯಿಯ ದಾಸರಾದ ಪ್ರಜೆಗಳು. ಮಂಜು ಹನಿಗಳು ಉದುರಿ ಬಿದ್ದು ಮರಳ ಪದರಗಳು ತೇವಗೊಳ್ಳುವಂತೆ ದಿವ್ಯ ವಚನಗಳ ಅಮೃತ ಸುರಿದು ಮನುಷ್ಯ ಮನಸ್ಸುಗಳು ಪಕ್ವಗೊಳ್ಳತೊಡಗಿದವು. ಅಲ್‌ಹಮ್ದುಲಿಲ್ಲಾಹ್. ಇದೆಂತಹ ಪರಿವರ್ತನೆ! ಆ ಪರಿವರ್ತನೆಯನ್ನು ದಾಟಿ ಹೋಗುವ ಇನ್ನೊಂದು ಪರಿವರ್ತನೆ ಜಗತ್ತಿನ ಇತಿಹಾಸದಲ್ಲೆಲ್ಲಾದರೂ ಕಾಣಲು ಸಾಧ್ಯವೇ?

ಜಗತ್ತಿನಲ್ಲಿ ಅವತರಿಸಿದ ಸಕಲ ವಿಚಾರಧಾರೆಗಳನ್ನೂ ಮೆಟ್ಟಿನಿಂತ ಪರಿವರ್ತನೆಯ ಇಸ್ಲಾಮಿ ಇತಿಹಾಸವು ಕೇವಲ 23 ವರ್ಷಗಳ ಪ್ರವಾದೀ ಪರಿಶ್ರಮ ಹಾಗೂ ಧರ್ಮೋಪದೇಶಗಳ ವಿಪುಲವಾದ ಬೆಳೆಯಾಗಿದೆ. ಈ ಪರಿವರ್ತನೆಯ ಕಹಳೆ ಪ್ರಥಮವಾಗಿ ಮೊಳಗಿದ್ದು ಪರ್ವತದ ತಪ್ಪಲಿನಿಂದಾಗಿತ್ತು. ಮುಹಮ್ಮದ್(ಸ)ರು ಕಿಕ್ಕಿರಿದು ನೆರೆದಿದ್ದ ಜನ ಸಂದಣಿಯ ಪ್ರೀತಿ ಪಾತ್ರರಾಗಿದ್ದರು. ಆದರೆ ಮೂರ್ನಾಲ್ಕು ಮಾತುಗಳನ್ನಾಡುವಷ್ಟರಲ್ಲೇ ಅವರು ಆ ಜನರ ಶತ್ರುವಾಗಿ ಮಾರ್ಪಟ್ಟರು. ಕಿತ್ತೆಸೆಯಬೇಕಾಗಿದ್ದ ಕೆಡುಕುಗಳ ಒಂದು ಉದ್ದನೆಯ ಪಟ್ಟಿಯನ್ನು ಜೋರಾಗಿ ಓದಿದ್ದರಿಂದಲ್ಲ. ಒಂದು ವೇಳೆ ಅದುವೇ ಪರಿವರ್ತನೆಯ ಪವಿತ್ರ ವಚನಗಳಲ್ಲಿ ಅತಿ ಪ್ರಧಾನವಾದುದ್ದಾಗಿರುತ್ತಿದ್ದರೆ ಅರಬಿಗಳು ಅಲ್‌ಅಮೀನ್‌ರನ್ನು ತಬ್ಬಿಕೊಳ್ಳುತ್ತಿದ್ದರು. ಆದರೆ ಪ್ರಧಾನ ವಿಷಯ ಅದಾಗಿರಲಿಲ್ಲ.

ತನಗೆ ವಹಿಸಿಕೊಟ್ಟ ಕರ್ಮದ ಮರ್ಮದಿಂದ ಅವರು ಒಂದಿಷ್ಟೂ ಬದಲಾಗಲಿಲ್ಲ. ತೌಹೀದ್‌ನ ಘೋಷಣೆಯು ಪರ್ವತದ ತಪ್ಪಲನ್ನು ಅಕ್ರಮಾಸಕ್ತಗೊಳಿಸಿದಾಗಲೂ ಅವರು ಹಿಂದೆ ಸರಿಯಲಿಲ್ಲ. ತದ ನಂತರದ ದಾರಿಯಲ್ಲಿ ದಾಟಿದ ಅಗ್ನಿ ಕುಂಡಗಳೆಷ್ಟು? ಎದುರಿಸಬೇಕಾಗಿ ಬಂದ ಮೊನಚು ಬಾಣಗಳೆಷ್ಟು? ಇವೆಲ್ಲಾ ಯಾಕಾಗಿ?

ತೌಹೀದ್ ಮತ್ತು ಶಿರ್ಕ್ ಪರಸ್ಪರ ಹೊಂದಿಕೊಳ್ಳುವುದಿಲ್ಲ. ಒಂದು ಇನ್ನೊಂದರ ದಿಕ್ಕು ಬದಲಿಸಿ ಬಿಡುತ್ತದೆ. ತೌಹೀದ್ ಬಂದರೆ ಶಿರ್ಕ್ ಮಾಯವಾಗುತ್ತದೆ. ಶಿರ್ಕ್‌ನ ಶಾಖೆಗಳಾದ ಅಂಧವಿಶ್ವಾಸ, ಅನಾಚಾರ ಮೂಢನಂಬಿಕೆಗಳು ಇಲ್ಲದಾಗುವುವು. ತೌಹೀದ್‌ನಲ್ಲಿರುವ ಸತ್ಯ ವಿಶ್ವಾಸಿಯನ್ನು ಶಿರ್ಕ್‌ನೆಡೆಗೆ ಕೊಡೊಯ್ಯುವ ಸಾಕಷ್ಟು ದಾರಿಗಳಿವೆ. ಇರುವೆ ಹತ್ತಿದಂತೆ ಶಿರ್ಕ್ ಬಹಳ ಸಾವಕಾಶವಾಗಿ ಮಾನವನೊಳಗೆ ಪ್ರವೇಶಿಸುತ್ತದೆ. ಆದರೆ ಶಿರ್ಕ್‌ನಿಂದ ತೌಹೀದ್‌ಗೆ ಪರಿವರ್ತನೆಗೊಳ್ಳುವುದೆಂದರೆ ಅದು ಚಿಂತನಾತ್ಮಕ ಪುನರುತ್ಥಾನವಾಗಿದೆ. ಅದು ಗುಪ್ತ ವಿಷಯವಲ್ಲ, ಬಹಿರಂಗ ಪ್ರಕಟನೆಯಾಗಿದೆ.

ಶಿರ್ಕ್ ಎಂಬುದು ಸೃಷ್ಟಿಕರ್ತನೊಂದಿಗೆ ಮಾಡುವ ಅತಿ ದೊಡ್ಡ ಅಕ್ರಮವೂ ಎಲ್ಲಾ ಪಥಭ್ರಷ್ಟತೆಗಳ ಮೂಲ ಸ್ಥಾನವೂ ಆಗಿದೆ. ತೌಹೀದ್ ಎಂಬುದು ಶಿರ್ಕ್ ಎಂಬ ಭೀಕರ ರೋಗದ ಔಷಧಿಯಾಗಿದೆ. ತೌಹೀದ್ ಆಧಾರಿತ ಧರ್ಮೋಪದೇಶವು ವಿಶ್ವಾಸ ಶುದ್ಧಿ ಮತ್ತು ಆತ್ಮ ಸಂಸ್ಕರಣೆಯ ಅತ್ಯುತ್ತಮ ಚಿಕಿತ್ಸೆಯಾಗಿದೆ. ಅದುವೇ ಪ್ರವಾದಿಗಳು ನಿರ್ವಹಿಸಿದ ದೌತ್ಯ. ಇಸ್ಲಾಮಿನ ಮಳೆಗಾಲ ದೂರವಾಗಿ ಸಿಡಿಲು, ಬಿರುಗಾಳಿಗಳು ಕೊನೆಗೊಂಡು ವಸಂತ ಕಾಲ ಬಂದಾಗ ಸಂದರ್ಭೋಚಿತವಾಗಿ ಎತ್ತಿ ಹೇಳಬೇಕಾದ ವಿಷಯವಲ್ಲ ತೌಹೀದ್. ಪರ್ವತದ ತಪ್ಪಲಲ್ಲಿ ಪ್ರವಾದಿ(ಸ)ರು ಘೋಷಿಸಿದ್ದು ಹಾಗಲ್ಲ. ಪ್ರವಾದಿ ದೌತ್ಯದ ರೀತಿಯನ್ನು ಪರಿಶೀಲಿಸಿದರೆ ಈ ವಾಸ್ತವವು ಯಾರಿಗೂ ಮನದಟ್ಟಾಗಬಹುದು. ಇಸ್ಲಾಮಿನ ನವೋದಯ ಹಾಗೂ ಉನ್ನತಿಗಾಗಿ ಪರಿಶ್ರಮಿಸುವವರಿಗೆ ಅದರಲ್ಲಿ ಪಾಠವಿದೆ. ಸರ್ವ ಪ್ರಥಮವಾಗಿ ತೌಹೀದಿನ ಚುಚ್ಚುಮದ್ದು ಪ್ರಯೋಗಿಸುವ ಮೂಲಕವೇ ಇಸ್ಲಾಮನ್ನು ಪರಿಚಯಿಸಬೇಕಾಗಿದೆ. ಏಕೆಂದರೆ ತೌಹೀದ್ ಇಲ್ಲದೆ ಇಸ್ಲಾಮ್ ಇಲ್ಲ. ಮುಸ್ಲಿಮರೆಂದು ಹೇಳಿಕೊಂಡು ದರ್ಗಾಗಳಿಗೆ ಹರಕೆ ಸಲ್ಲಿಸಿ ಮೃತ ಮಹಾತ್ಮರ ಹಕ್ಕ್, ಜಾಹ್, ಬರ್ಕತ್‌ನಿಂದ ಪ್ರಾರ್ಥಿಸುವವರು, ಉರೂಸ್, ಮೌಲೀದ್, ರಾತೀಬ್, ಕುತುಬಿಯತ್ ಆಚರಿಸುವವರು ನೈಜ ಮುಸ್ಲಿಮರಲ್ಲ. ಅಂತಹವರು ಅಪ್ಪಟ ಮುಶ್ರಿಕರೆಂಬುದರಲ್ಲಿ ಸಂಶಯವಿಲ್ಲ. ●

# ಅಧ್ಯಾಯ - 3 ಆಲ್ ಇಮ್ರಾನ್

ಒಟ್ಟು ಸೂಕ್ತಗಳು: 200

ಮುಹಮ್ಮದ್ ಅಮಾನಿ ಮೌಲವಿ

13 قَدْ كَانَ لَكُمْ اٰيَةٌ فِىْ فِئَتَيْنِ الْتَقَتَا ؕ فِئَةٌ تُقَاتِلُ فِىْ سَبِيْلِ اللّٰهِ وَاُخْرٰى كَافِرَةٌ يَّرَوْنَهُمْ مِّثْلَيْهِمْ رَاْىَ الْعَيْنِ ؕ وَاللّٰهُ يُؤَيِّدُ بِنَصْرِهٖ مَنْ يَّشَآءُ ؕ اِنَّ فِىْ ذٰلِكَ لَعِبْرَةً لِّاُولِى الْاَبْصَارِ ﴿۱۳﴾

14 زُيِّنَ لِلنَّاسِ حُبُّ الشَّهَوٰتِ مِنَ النِّسَآءِ وَالْبَنِيْنَ وَالْقَنَاطِيْرِ الْمُقَنْطَرَةِ مِنَ الذَّهَبِ وَالْفِضَّةِ وَالْخَيْلِ الْمُسَوَّمَةِ وَالْاَنْعَامِ وَالْحَرْثِ ؕ ذٰلِكَ مَتَاعُ الْحَيٰوةِ الدُّنْيَا ۚ وَاللّٰهُ عِنْدَهٗ حُسْنُ الْمَاٰبِ ﴿۱۴﴾

15 قُلْ اَؤُنَبِّئُكُمْ بِخَيْرٍ مِّنْ ذٰلِكُمْ ؕ لِلَّذِيْنَ اتَّقَوْا عِنْدَ رَبِّهِمْ جَنّٰتٌ تَجْرِىْ مِنْ تَحْتِهَا الْاَنْهٰرُ خٰلِدِيْنَ فِيْهَا وَاَزْوَاجٌ مُّطَهَّرَةٌ وَّرِضْوَانٌ مِّنَ اللّٰهِ ؕ وَاللّٰهُ بَصِيْرٌ ۢ بِالْعِبَادِ ﴿۱۵﴾

**13**

| | | | | | | |
|---|---|---|---|---|---|---|
| ಯುದ್ಧ ಮಾಡುತ್ತಿತ್ತು تُقَاتِلُ | ಒಂದು ತಂಡ فِئَةٌ | ಪರಸ್ಪರ ಎದುರ್ಗೊಂಡ الْتَقَتَا | ಎರಡು ತಂಡಗಳಲ್ಲಿ فِىْ فِئَتَيْنِ | ನಿದರ್ಶನ اٰيَةٌ | ನಿಮಗೆ لَكُمْ | ಇತ್ತು قَدْ كَانَ |
| ಕಣ್ಣಾರೆ مِّثْلَيْهِمْ | ಅವರು ಅವರನ್ನು ಕಂಡಿದ್ದರು يَّرَوْنَهُمْ | ಸತ್ಯನಿಷೇಧಿಗಳಾಗಿದ್ದರು كَافِرَةٌ | ಮತ್ತು ಇನ್ನೊಂದು وَاُخْرٰى | ಅಲ್ಲಾಹನ ಮಾರ್ಗದಲ್ಲಿ فِىْ سَبِيْلِ اللّٰهِ | | |
| ಒಂದು ಪಾಠ لَعِبْرَةً | ನಿಶ್ಚಯವಾಗಿಯೂ ಅದರಲ್ಲಿದೆ اِنَّ فِىْ ذٰلِكَ | ತಾನಿಚ್ಛಿಸುವವರನ್ನು مَنْ يَّشَآءُ | ತನ್ನ ಸಹಾಯದಿಂದ بِنَصْرِهٖ | ಮತ್ತು ಅಲ್ಲಾಹು ಬಲಪಡಿಸುತ್ತಾನೆ وَاللّٰهُ يُؤَيِّدُ | | |
| | | | | ಅಂತರ್ದೃಷ್ಟಿಯುಳ್ಳವರಿಗೆ لِّاُولِى الْاَبْصَارِ | | |

**14**

| | | | | | | |
|---|---|---|---|---|---|---|
| ಮತ್ತು ಪುತ್ರರು وَالْبَنِيْنَ | ಸ್ತ್ರೀಯರು مِنَ النِّسَآءِ | ಅಪೇಕ್ಷಣೀಯ ವಸ್ತುಗಳೊಂದಿಗೆ الشَّهَوٰتِ | ಪ್ರೀತಿಯನ್ನು حُبُّ | ಜನರಿಗೆ لِلنَّاسِ | ಅಲಂಕಾರವಾಗಿ ಮಾಡಲಾಗಿದೆ زُيِّنَ | |
| ಮತ್ತು ಕುದುರೆಗಳು وَالْخَيْلِ | ಮತ್ತು ಬೆಳ್ಳಿಯ ಪೈಕಿ وَالْفِضَّةِ | ಬಂಗಾರದ ಪೈಕಿ مِنَ الذَّهَبِ | ರಾಶಿ ಹಾಕಲ್ಪಟ್ಟ الْمُقَنْطَرَةِ | ಮತ್ತು ಅಪಾರ ಸಂಪತ್ತು وَالْقَنَاطِيْرِ | | |
| ಇಹಲೋಕ ಜೀವನದ الْحَيٰوةِ الدُّنْيَا | ಸಾಧನಗಳಾಗಿವೆ مَتَاعُ | ಅದು ذٰلِكَ | ಮತ್ತು ಕೃಷಿ ಸ್ಥಳ وَالْحَرْثِ | ಮತ್ತು ಜಾನುವಾರುಗಳು وَالْاَنْعَامِ | ಗುರುತು ಮಾಡಲಾದ الْمُسَوَّمَةِ | |
| | ಅತ್ಯುತ್ತಮ ತಲುಪುದಾಣ حُسْنُ الْمَاٰبِ | ಅವನ ಬಳಿಯಲ್ಲಾಗಿದೆ عِنْدَهٗ | ಅಲ್ಲಾಹನಾದರೋ وَاللّٰهُ | | | |

**15**

| | | | | | | |
|---|---|---|---|---|---|---|
| ದೇವ ಭಯವುಳ್ಳವರಿಗೆ لِلَّذِيْنَ اتَّقَوْا | ಅದಕ್ಕಿಂತಲೂ مِّنْ ذٰلِكُمْ | ಉತ್ತಮವಾದುದರ ಕುರಿತು بِخَيْرٍ | ನಾನು ನಿಮಗೆ ವಿಷಯವನ್ನು ತಿಳಿಸಲೇ? اَؤُنَبِّئُكُمْ | ಹೇಳಿರಿ قُلْ | | |
| ಶಾಶ್ವತ ವಾಸಿಗಳಾಗಿ خٰلِدِيْنَ | ನದಿಗಳು الْاَنْهٰرُ | ಅವರ ಅಡಿ ಭಾಗದಿಂದಾಗಿ مِنْ تَحْتِهَا | ಪ್ರವಹಿಸುತ್ತಿರುವ تَجْرِىْ | ಸ್ವರ್ಗಗಳು جَنّٰتٌ | ತಮ್ಮ ಪ್ರಭುವಿನ ಬಳಿ عِنْدَ رَبِّهِمْ | |
| ಅಲ್ಲಾಹು وَاللّٰهُ | ಅಲ್ಲಾಹನ ವತಿಯ مِّنَ اللّٰهِ | ಮತ್ತು ಪ್ರೀತಿ وَّرِضْوَانٌ | ಪರಿಶುದ್ಧಿಗೊಳಿಸಲ್ಪಟ್ಟ مُّطَهَّرَةٌ | ಜೊತೆಗಾತಿಯರು وَاَزْوَاجٌ | ಅವುಗಳಲ್ಲಿ فِيْهَا | |
| | ದಾಸರ ಕುರಿತು بِالْعِبَادِ | ವೀಕ್ಷಿಸುವವನಾಗಿರುತ್ತಾನೆ بَصِيْرٌ | | | | |

13. (ಬದ್ರ್ ರಣಾಂಗಣದಲ್ಲಿ) ಪರಸ್ಪರ ಎದುರು ಗೊಂಡ(ಆ) ಎರಡು ತಂಡಗಳಲ್ಲಿ ನಿಮಗೊಂದು ದೃಷ್ಟಾಂತವಿತ್ತು. (ಅವರಲ್ಲಿ) ಒಂದು ಪಂಗಡವು ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡುತ್ತಿತ್ತು. ಇನ್ನೊಂದು ಸತ್ಯನಿಷೇಧಿಗಳದ್ದಾಗಿತ್ತು. ಅವರು (ಸತ್ಯನಿಷೇಧಿಗಳು) ಅವರನ್ನು (ಸತ್ಯ ವಿಶ್ವಾಸಿಗಳನ್ನು) ತಮಗಿಂತ ಇಮ್ಮಡಿಯಾಗಿ ಕಣ್ಣಾರೆ ಕಂಡಿದ್ದರು.* ಮತ್ತು ಅಲ್ಲಾಹು ತಾನಿಚ್ಛಿಸುವವರನ್ನು ತನ್ನ ಸಹಾಯದಿಂದ ಬಲಪಡಿಸುತ್ತಾನೆ. ನಿಶ್ಚಯವಾಗಿಯೂ ಅಂತರ್ದೃಷ್ಟಿಯುಳ್ಳವರಿಗೆ ಅದರಲ್ಲಿ ಒಂದು (ದೊಡ್ಡ)ಪಾಠವಿದೆ.

14. ಸ್ತ್ರೀಯರು, ಪುತ್ರರು, ರಾಶಿ ಹಾಕಲ್ಪಟ್ಟ ಚಿನ್ನ, ಬೆಳ್ಳಿ ಸಹಿತ ಅಪಾರ ಸಂಪತ್ತುಗಳು, ಗುರುತು ಮಾಡಲಾದ (ಉತ್ಕೃಷ್ಟ) ಕುದುರೆಗಳು, (ಆಡು, ಕುರಿ, ಒಂಟೆಗಳಿತ್ಯಾದಿ) ಜಾನುವಾರುಗಳು ಮತ್ತು ಕೃಷಿ ಸ್ಥಳಗಳು ಇತ್ಯಾದಿ ಅಪೇಕ್ಷಣೀಯ ವಸ್ತುಗಳಲ್ಲಿರುವ ಪ್ರೀತಿಯನ್ನು ಜನರಿಗೆ ಅಲಂಕಾರವಾಗಿ ಮಾಡಲಾಗಿದೆ. ಇವೆಲ್ಲಾ ಇಹಲೋಕ ಜೀವನದ ಸಾಧನಗಳಾಗಿವೆ. ಆದರೆ ಅತ್ಯುತ್ತಮ ತಲುಪುದಾಣವು ಅಲ್ಲಾಹನ ಬಳಿಯಲ್ಲಾಗಿದೆ.

15. (ಪ್ರವಾದಿಯವರೇ) ಹೇಳಿರಿ: "ಅದಕ್ಕಿಂತಲೂ (ಆ ಐಹಿಕ ಸುಖಕ್ಕಿಂತಲೂ) ಉತ್ತಮವಾದುದರ ಕುರಿತು ನಾನು ನಿಮಗೆ ತಿಳಿಸಿ ಕೊಡಲೇ? (ಅದೇನೆಂದರೆ) ದೇವಭಯವುಳ್ಳವರಿಗೆ ತಮ್ಮ ಪ್ರಭುವಿನ ಬಳಿ ತಳಭಾಗದಿಂದಾಗಿ ನದಿಗಳು ಪ್ರವಹಿಸುತ್ತಿರುವ ಸ್ವರ್ಗಗಳಿವೆ. ಅದರಲ್ಲಿ ಅವರು ಶಾಶ್ವತವಾಸಿಗಳಾಗಿರುವರು. (ಅಲ್ಲಿ) ಪರಿಶುದ್ಧರಾದ ಜೊತೆಗಾತಿಯರು ಮತ್ತು ಅಲ್ಲಾಹನ ಸಂಪ್ರೀತಿಯಿರುವುದು. ಅಲ್ಲಾಹು (ತನ್ನ) ದಾಸರ ಬಗೆಗೆ ವೀಕ್ಷಿಸುವವನಾಗಿರುತ್ತಾನೆ

Name & Address:

**PAVITHRA SANDESHA**
*Kannada Fortnightly*
Polymer House, 2nd Floor, Nellikai Road, Mangalore - 575 001

Regd. With RNI No.: 63987/96
Postal Regd. No. KA/SK/MNG/160/2012-2014
Licence to Post without prepayment.
WPP/SK/MNG-104/2012-2014
Posted at Head Post Office, Mangalore.
Posting Date: 13th & 28th of Every Month
**Publication Date: 10th & 25th of Every Month**




ಅಲ್ಲಾಹನ ಹೊರತು ಯಾವ ಆರಾಧ್ಯನೂ ಇಲ್ಲ. (ಅವನು) ಜೀವಿಸಿರುವವನು, ಸರ್ವ ನಿಯಂತ್ರಕನು. ತೂಕಡಿಕೆಯಾಗಲಿ, ನಿದ್ರೆಯಾಗಲಿ ಅವನನ್ನು ಬಾಧಿಸು ವುದಿಲ್ಲ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿರುವುದೆಲ್ಲವೂ ಅವನದೇ. ಅವನ ಅನುಮತಿಯಿಲ್ಲದೆ ಅವನ ಬಳಿ ಶಿಫಾರಸು ಮಾಡುವವನು ಯಾರಿದ್ದಾನೆ ? (ಯಾರೂ ಇಲ್ಲ). ಅವರ ಮುಂದಿರುವುದನ್ನೂ ಅವರ ಹಿಂದಿರುವುದನ್ನೂ ಅವನು ಅರಿಯುತ್ತಾನೆ. ಅವನ ಜ್ಞಾನದಿಂದ ಅವನು ಇಚ್ಛಿಸಿದುದರ ಹೊರತು (ಬೇರೆ) ಯಾವುದರ ಕುರಿತೂ ಅವರು ಸೂಕ್ಷ್ಮವಾಗಿ ತಿಳಿಯಲಾರರು. ಮತ್ತು ಅವನ ಅಧಿ ಕಾರ ಪೀಠವು ಭೂಮಿ-ಆಕಾಶಗಳಿಗೂ ವಿಶಾಲವಾಗಿದೆ. ಅವೆರಡರ ಸಂರಕ್ಷಣೆಯು ಅವನನ್ನು ಭಾರಗೊಳಿಸುವುದಿಲ್ಲ. ಅವನು ಉನ್ನತನೂ ಮಹಾನನೂ ಆಗಿದ್ದಾನೆ. (2X255)

اللهُ لَا إِلٰهَ إِلَّا هُوَ الْحَيُّ الْقَيُّومُ
لَا تَأْخُذُهُ سِنَةٌ وَلَا نَوْمٌ
لَهُ مَا فِي السَّمَاوَاتِ وَمَا فِي الْأَرْضِ
مَنْ ذَا الَّذِي يَشْفَعُ عِنْدَهُ إِلَّا بِإِذْنِهِ
يَعْلَمُ مَا بَيْنَ أَيْدِيهِمْ وَمَا خَلْفَهُمْ
وَلَا يُحِيطُونَ بِشَيْءٍ مِنْ عِلْمِهِ إِلَّا بِمَا شَاءَ
وَسِعَ كُرْسِيُّهُ السَّمَاوَاتِ وَالْأَرْضَ
وَلَا يَئُودُهُ حِفْظُهُمَا وَهُوَ الْعَلِيُّ الْعَظِيمُ

So which of the favors of your Lord would you deny

ಹಾಗಿರುವಾಗ ನಿಮ್ಮ ಪ್ರಭುವಿನ ಅನುಗ್ರಹಗಳ ಪೈಕಿ ಯಾವುದನ್ನು ಸುಳ್ಳಾಗಿಸುವಿರಿ? (55x13)

فَبِأَيِّ آلَاءِ رَبِّكُمَا تُكَذِّبَانِ

ಇಂದು ನಾವು ಇವರ ಬಾಯಿಗಳಿಗೆ ಮುದ್ರೆಯನ್ನೊತ್ತಿ ಬಿಡುವೆವು. ಇವರು ಭೂಲೋಕದಲ್ಲಿ ಏನು ಸಂಪಾದಿಸುತ್ತಿದ್ದರೆಂದು ಇವರ ಕೈಗಳು ನಮ್ಮೊಡನೆ ಮಾತಾಡುವುವು ಮತ್ತು ಇವರ ಕಾಲುಗಳು ಸಾಕ್ಷ್ಯ ಹೇಳುವುವು. ಸೂರ ಯಾಸೀನ್:65

ಹ ಆಯಿಶಾ(ರ) ರಿಗೆ ನರಕದ ನೆನಪಾದಾಗ ಅತ್ತು ಬಿಟ್ಟರು. ಪ್ರವಾದಿ(ಸ) ಕೇಳಿದರು:
ನಿಮಗೇನಾಯಿತು? ಅವರು ಹೇಳಿದರು: ನರಕದ ನೆನಪಾದಾಗ ಅಳು ಬಂತು. ಪ್ರವಾದಿಯವರೇ(ಸ) ತಾವು [illegible] ದಿನದಂದು ತಮ್ಮ ಪತ್ನಿಯರನ್ನು ನೆನಪಿಸುವಿರಾ? ಪ್ರವಾದಿ(ಸ) ಹೇಳಿದರು: ಮೂರು ಸಂದರ್ಭಗಳಲ್ಲಿ ಯಾರೂ ಯಾರನ್ನೂ ನೆನಪಿಸಲಾರರು.
1 ಕರ್ಮಗಳನ್ನು ತೂಗುವ ಸಂದರ್ಭಗಳಲ್ಲಿ. ಒಂದು ವ್ಯಕ್ತಿಯೊಬ್ಬನೂ ತನ್ನ ಕರ್ಮದ ತಟ್ಟೆ ಭಾರವಾಗಿರುವುದೋ ಹಗುರವಾಗಿರುವುದೋ ಎಂಬ ಚಿಂತೆಯಲ್ಲಿರುವನು
2 ಕರ್ಮ ಪತ್ರದ ಪರಿಣಾಮವನ್ನು ಕೈಯಲ್ಲಿ ಹಿಡಿಯುವಾಗ. ಅದನ್ನು ಬಲಗೈಯಲ್ಲಿ ನೀಡಲಾಗುವುದೋ ಅಥವಾ ಬೆನ್ನ ಹಿಂದಿನಿಂದ ಎಡಗೈಯಲ್ಲಿ ನೀಡಲಾಗುವುದೋ ಎಂಬ ಚಿಂತೆಯಲ್ಲಿರುವನು
3 ನರಕದ ಮೇಲೆ ಸಿರಾತ್ ಸೇತುವೆ ಇಡಲಾಗಿ ಮಾನವನು ಅದರಿಂದ ದಾಟುವ ಸಂದರ್ಭ
(ಅಬೂ ದಾವೂದ್)

ಪ್ರವಾದಿ(ಸ) ಹೇಳಿದರು:
ಯಾರು ಈ ಲೋಕವನ್ನು ಪ್ರೀತಿಸುವನೋ ಅವನು ಪರಲೋಕವನ್ನು ಹಾಳುಮಾಡುವನು. ಯಾರಿಗೆ ಪರಲೋಕವು ಪ್ರಿಯವೋ ಅವನು ತನ್ನ ಇಹಲೋಕವನ್ನು ಹಾಳು ಮಾಡುವನು.ಆದುದರಿಂದ ನೀವು ಶಾಶ್ವತವಾಗಿ ಉಳಿಯುವ ಜೀವನಕ್ಕೆ ನಾಶವಾಗಿ ಹೋಗುವ ಜೀವನಕ್ಕಿಂತ ಪ್ರಾಶಸ್ತ್ಯ ನೀಡಿರಿ.
ಅಬೂ ಮೂಸಾ ಅಶ್‌ಅರಿ(ರ)-ಮಿಶ್ಕಾತ್

Time is running out Turn to Allah before the end.

ಅಲ್ಲಾಹನಲ್ಲಿ
ಮತ್ತು
ಅಂತ್ಯ ದಿನದಲ್ಲಿ
ವಿಶ್ವಾಸವಿಡುವವರು
ಒಳಿತನ್ನೇ ಹೇಳಲಿ,
ಅಥವಾ
ಮೌನ ಪಾಲಿಸಲಿ.

(ಸಹೀ ಮುಸ್ಲಿಮ್)

وَنُفِخَ فِي الصُّورِ فَصَعِقَ مَنْ فِي السَّمَاوَاتِ وَمَنْ فِي الْأَرْضِ إِلَّا مَنْ شَاءَ اللَّهُ ثُمَّ نُفِخَ فِيهِ أُخْرَىٰ فَإِذَا هُمْ قِيَامٌ يَنْظُرُونَ

ಅಂದು ಸೂರ್ (ಕಹಳೆ) ಊದಲ್ಪಡುವುದು ಮತ್ತು ಅಲ್ಲಾಹ್ ಯಾರನ್ನು ಜೀವಂತ ವಾಗಿರಿಸಲಿಚ್ಛಿಸುವನೋ ಅವನ ಹೊರತು ಭೂಮಿ ಆಕಾಶಗಳಲ್ಲಿರುವವರೆಲ್ಲರೂ ಸತ್ತು ಬೀಳುವರು. ತರುವಾಯ ಇನ್ನೊಂದು ಕಹಳೆ ಊದಲ್ಪಡುವುದು ಮತ್ತು ಒಮ್ಮೆಲೇ ಎಲ್ಲರೂ ಎದ್ದು ನೋಡತೊಡಗುವರು.
ಸೂರ ಅಝ್ಝುಮರ್: 68

ಜುಮಾ ದಿವಸ ದೇವಚರರು (ಮಲಾಯಿಕ್‌ಗಳು) ಮಸೀದಿಯ ಎಲ್ಲಾ ದ್ವಾರಗಳಲ್ಲಿ ನಿಂತು ಮಸೀದಿಗೆ ಬರುವವರ ಕುರಿತು ದಾಖಲಿಸುವರು. ಖತೀಬರು ಖುತುಬಾ ಪ್ರಾರಂಭಿಸುವಾಗ ತಮ್ಮ ದಾಖಲೆ ಪುಸ್ತಕವನ್ನು ಮಡಚಿ ಖುತುಬಾ ಆಲಿಸುವರು. ಪ್ರಥಮವಾಗಿ ಮಸೀದಿಗೆ ಬಂದವರಿಗೆ ಒಂಟೆ ಬಲಿ ಕೊಟ್ಟ ಪುಣ್ಯ ಲಭಿಸುವುದು. ಅನಂತರ ಪಶು, ಆಡು, ಕೋಳಿ, ಮೊಟ್ಟೆ ದಾನ ಮಾಡಿದ ಪುಣ್ಯ ಲಭ್ಯವಾಗುವುದು. (ಸಹೀ ಮುಸ್ಲಿಮ್)

رَبَّنَا اصْرِفْ عَنَّا عَذَابَ جَهَنَّمَ
إِنَّ عَذَابَهَا كَانَ غَرَامًا
إِنَّهَا سَاءَتْ مُسْتَقَرًّا وَمُقَامًا

'ನಮ್ಮ ಪ್ರಭೂ,' ನರಕ ಶಿಕ್ಷೆಯನ್ನು ನಮ್ಮಿಂದ ದೂರೀಕರಿಸು. ನಿಶ್ಚಯವಾಗಿಯೂ ಅದರ ಶಿಕ್ಷೆಯು ಒಂದು ಶಾಶ್ವತ ನಷ್ಟವಾಗಿದೆ. ನಿಶ್ಚಯವಾಗಿಯೂ ಅದು (ನರಕ) ಅತ್ಯಂತ ನಿಕೃಷ್ಟ ಭವನವೂ ವಾಸಸ್ಥಳವೂ ಆಗಿರುತ್ತದೆ.' (25x65, 66)

وَلَا يَحْسَبَنَّ الَّذِينَ يَبْخَلُونَ بِمَا آتَاهُمُ اللَّهُ مِنْ فَضْلِهِ هُوَ خَيْرًا لَهُمْ بَلْ هُوَ شَرٌّ لَهُمْ سَيُطَوَّقُونَ مَا بَخِلُوا بِهِ يَوْمَ الْقِيَامَةِ

ಅಲ್ಲಾಹು ತನ್ನ ಅನುಗ್ರಹದಿಂದ ತಮಗೆ ನೀಡಿರುವುದರಲ್ಲಿ ಜಿಪುಣತೆ ತೋರಿಸುವವರು ಅದು ತಮಗೆ ಹಿತಕರವೆಂದು ಖಂಡಿತ ಭಾವಿಸುವುದು ಬೇಡ. ಆದರೆ ಅದು ಅವರಿಗೆ ಅಹಿತಕರವಾಗಿದೆ. ಅವರು ಯಾವುದರಲ್ಲಿ ಜಿಪುಣತೆ ತೋರಿದರೋ ಅದನ್ನು ಪುನರುತ್ಥಾನ ದಿನದಂದು ಅವರಿಗೆ ಕಂಠಾಭರಣವನ್ನಾಗಿ ಮಾಡಲಾಗುವುದು. (3x180)

Printed, Published & Owned by RIYAZ AHMED on behalf of SATHYA PRAKASHANA PUBLICATION TRUST MANGALORE, Printed at Digantha Mudrana Ltd., Yeyyadi, Mangalore, D.K. Published at 20-2-155/1, 2nd Floor, Polymer House Bldg., Nellikai Road, Mangalore - 575 001, D.K.. D.T.P.: Sowmya Graphics, Mangalore. Editor: M.G. Muhammad